RNI No. **KARBIL/2001/47147**

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೮<br>Volume 148 | ಬೆಂಗಳೂರು, ಗುರುವಾರ, ಮೇ ೨, ೨೦೧೩ (ವೈಶಾಖ ೧೨, ಶಕ ವರ್ಷ ೧೯೩೫)<br>Bangalore, Thursday, May 2, 2013 (Vaishakha 12, Shaka Varsha 1935) | ಸಂಚಿಕೆ ೧೮<br>Issue 18 |
|---|---|---|

## ಭಾಗ ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಕಂದಾಯ ಸಚಿವಾಲಯ

**ವಿಷಯ** : ಉದ್ದೂರು ಆಸ್ಪತ್ರೆ ಕಾವಲು ಬೇಸಾಯ ಸಹಕಾರ ಸಂಘ, ಹುಣಸೂರು ತಾಲ್ಲೂಕು, ಮೈಸೂರು ಜಿಲ್ಲೆ ಇವರಿಗೆ ಭೂಮಿ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ : ಆರ್‌ಡಿ 135 ಎಲ್‌ಜಿಎಂ 1964, ದಿನಾಂಕ : 4–1–1967
2. ಸರ್ಕಾರದ ಆದೇಶ ಸಂಖ್ಯೆ : ಆರ್‌ಡಿ 99 ಎಲ್‌ಜಿಎಂ 1986, ದಿನಾಂಕ : 19–2–94
3. ಜಿಲ್ಲಾಧಿಕಾರಿಗಳು, ಮೈಸೂರು ಇವರ ಪತ್ರ ಸಂಖ್ಯೆ : ಎಲ್‌ಎನ್‌ಡಿ (2) ಸಿಆರ್ : 300/98–99, ದಿನಾಂಕ : 7–4–2006 ಮತ್ತು 24–8–2011.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಸರ್ಕಾರಿ ಆದೇಶ ಸಂಖ್ಯೆ : ಆರ್‌ಡಿ 135 ಎಲ್‌ಜಿಎಂ 1964, ದಿನಾಂಕ : 4–1–1967ರಲ್ಲಿ 3458–01 ಎಕರೆ ಭೂಮಿಯನ್ನು ಗುತ್ತಿಗೆ ಆಧಾರದ ಮೇಲೆ ಉದ್ದೂರು ಆಸ್ಪತ್ರೆ ಕಾವಲು ಬೇಸಾಯ ಸಹಕಾರ ಸಂಘ, ಹುಣಸೂರು ತಾಲ್ಲೂಕು, ಮೈಸೂರು ಇವರಿಗೆ ಮಂಜೂರು ಮಾಡಲಾಗಿರುತ್ತದೆ.

2. ಸದರಿ ಸಂಘವು ಸರ್ಕಾರಿ ಬಾಕಿಗಳನ್ನು ತೀರುವಳಿ ಮಾಡಲು ವಿಫಲವಾದ ಕಾರಣ ಮಂಜೂರಾತಿ ಆದೇಶವನ್ನು ರದ್ದುಗೊಳಿಸಲಾಗಿರುತ್ತದೆ. ಆದಾಗ್ಯೂ ಕೆಲವು ಸದಸ್ಯರು ಹಾಗೂ ಸದಸ್ಯರಲ್ಲದವರು ಕಳೆದ 30 ವರ್ಷಗಳಿಂದ ಸಾಗುವಳಿ ಮಾಡುತ್ತಿದ್ದ ಕಾರಣ ಜಿಲ್ಲಾಧಿಕಾರಿ, ಮೈಸೂರು ಇವರ ಶಿಫಾರಸ್ಸಿನ ಮೇಲೆ, ಮೇಲೆ ಓದಲಾದ ಕ್ರಮಸಂಖ್ಯೆ (2)ರಲ್ಲಿನ ಸರ್ಕಾರದ ಆದೇಶ ಸಂಖ್ಯೆ : ಆರ್‌ಡಿ 99 ಎಲ್‌ಜಿಎಂ 1986 ದಿನಾಂಕ : 16–9–1994ರಲ್ಲಿ ಕೆಲವು ಷರತ್ತುಗಳಿಗೊಳಪಡಿಸಿ, 3125.25 ಎಕರೆ ಜಮೀನನ್ನು 1804 ವ್ಯಕ್ತಿಗಳಿಗೆ ಉದ್ದೂರು ಕಾವಲು ಗ್ರಾಮ, ಮೈಸೂರು ತಾಲ್ಲೂಕು ಇವರಿಗೆ 5–00 ಎಕರೆ ಜಮೀನಿಗೆ ಸೀಮಿತಗೊಳಿಸಿ ಮಂಜೂರಾತಿ ನೀಡಲಾಗಿರುತ್ತದೆ. ಪ್ರಸ್ತಾಪಿತ ಭೂಮಿಗೆ ಕ್ರಮವಾಗಿ ತರಿ ಹಾಗೂ ಖುಷ್ಕಿ ಪ್ರದೇಶಕ್ಕೆ ಎಕರೆ ಒಂದಕ್ಕೆ ರೂ. 1,000–00 ಮತ್ತು ರೂ. 2,000–00 ದರ ನಿಗದಿಪಡಿಸಲಾಗಿರುತ್ತದೆ.

3. ಗರಿಷ್ಠ 5–00 ಎಕರೆಗೆ ಸೀಮಿತಗೊಳಿಸಿದ ಷರತ್ತಿನ ಹಿನ್ನೆಲೆಯಲ್ಲಿ, 1374.31 ಎಕರೆ ಪ್ರದೇಶದಲ್ಲಿ ಸಾಗುವಳಿ ಮಾಡುತ್ತಿದ್ದ 264 ದೊಡ್ಡ ಪ್ರಮಾಣದ ಹಿಡುವಳಿದಾರರ ಪ್ರಕರಣಗಳನ್ನು ಪರಿಗಣಿಸಲಾಗಿರುವುದಿಲ್ಲ. ವಾಸ್ತವವಾಗಿ ಈ 264 ಕುಟುಂಬಗಳು ಈಗ 809 ಕುಟುಂಬಗಳಾಗಿ ಪರಿವರ್ತನೆಗೊಂಡು ಸಣ್ಣ ಹಿಡುವಳಿದಾರರಾಗಿ ವರ್ಗೀಕರಿಸಿ ಹೊಸದಾಗಿ ಪರಿಗಣಿಸಬೇಕಾಗಿರುತ್ತದೆ.

4. ಪ್ರಸ್ತುತ ಜಿಲ್ಲಾಧಿಕಾರಿ, ಮೈಸೂರು ಇವರು 2 ಹೆಕ್ಟೇರು ಜಮೀನು ಮೀರದ ಹಾಗೂ ಭೂಮಿಯನ್ನು ಖರೀದಿಸಿದವರಿಗೆ ಮಂಜೂರು ಮಾಡಲು ಶಿಫಾರಸ್ಸು ಮಾಡಿರುತ್ತಾರೆ. ಮುಂದುವರೆದು, ಈ 809 ಕುಟುಂಬಗಳು 5 ಎಕರೆಗಿಂತ ಭೂಮಿ ಹೊಂದಿಲ್ಲವೆಂದು ದೃಢಪಡಿಸಲಾಗಿರುತ್ತದೆ. ಅಲ್ಲದೆ, ಕರ್ನಾಟಕ ಭೂ ಕಂದಾಯ ಅಧಿನಿಯಮ 1964ರ ಕಲಂ 94(ಎ)(ಬಿ) ಅಡಿಯಲ್ಲಿ ಯಾವುದೇ ಅರ್ಜಿಯನ್ನು ದಾಖಲಿಸಿರುವುದಿಲ್ಲ. ಉಪ ವಿಭಾಗಾಧಿಕಾರಿ, ಹುಣಸೂರು ಇವರ ಪತ್ರ ದಿನಾಂಕ : 30–1–2013ರಲ್ಲಿ ವರದಿಯಾದಂತೆ ಮಾರ್ಗಸೂಚಿ ದರ ಹಾಗೂ ಮಾರುಕಟ್ಟೆ ದರ ಈ ಕೆಳಕಂಡಂತಿರುತ್ತದೆ.

| ಗ್ರಾಮ | ಮಾರುಕಟ್ಟೆ ದರ | | ಮಾರ್ಗಸೂಚಿ ಬೆಲೆ (ಎಕರೆ ಒಂದಕ್ಕೆ) | |
|---|---|---|---|---|
| | ಖುಷ್ಕಿ | ತರಿ | ಖುಷ್ಕಿ | ತರಿ |
| Aspatre Kavalu | 88598 | 230000 | 100000 | 200000 |
| Udduru Kavalu | 143277 | 227570 | 90000 | 180000 |

5. ಮೇಲೆ ಓದಲಾದ (3)ರ ಪತ್ರದಲ್ಲಿ, ಮೈಸೂರು ಜಿಲ್ಲಾಧಿಕಾರಿಗಳು 1374-31 ಎಕರೆ ಪ್ರದೇಶದಲ್ಲಿ ಸಾಗುವಳಿ ಮಾಡುತ್ತಿರುವ 809 ಕುಟುಂಬಗಳನ್ನು ಸಕ್ರಮಗೊಳಿಸಲು ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಈ 809 ಕುಟುಂಬಗಳ ಪೈಕಿ 119 ಪರಿಶಿಷ್ಟ ಜಾತಿ ಹಾಗೂ 17 ಕುಟುಂಬಗಳು ಪರಿಶಿಷ್ಟ ವರ್ಗದ ವ್ಯಕ್ತಿಗಳಾಗಿರುತ್ತಾರೆ. ಉಳಿದ 673 ಕುಟುಂಬಗಳು ಸಾಮಾನ್ಯ ವರ್ಗಕ್ಕೆ ಸೇರಿದವರಾಗಿರುತ್ತಾರೆ. ಪ್ರಸ್ತಾಪಿತ ರೈತರ ವಿವರಗಳು ಈ ಕೆಳಕಂಡಂತಿರುತ್ತವೆ.

| ಕ್ರಮ ಸಂಖ್ಯೆ | ವಿಷಯ | ಸ್ಥಳ | ವ್ಯಕ್ತಿಗಳ ಸಂಖ್ಯೆ | ವಿಸ್ತೀರ್ಣ |
|---|---|---|---|---|
| 1. | Persons who are eligible to get 2 hectares and lesser land | Uddur Kavalu,<br>Aspatre Kavalu | 400<br>262 | 638.28<br>491.09 |
| 2. | Persons who have purchased land and eligible for grant | Uddur Kavalu<br>Aspatre Kavalu | 18<br>53 | 42.19<br>70.24 |
| 3. | Persons who are having lands at Uddur Kavalu and Aspatre Kavalu and eligible for grant | Uddur Kavalu<br>Aspatre Kavalu | 50<br>26 | 74.02<br>61.29 |
| | ಒಟ್ಟು | | **809** | **1374.31** |

1. ಮಂಜೂರಾದ ಭೂಮಿಯನ್ನು ಖರೀದಿಸಿದ ಕೆಲವೊಂದು ವ್ಯಕ್ತಿಗಳಿಗೆ ಸದರಿ ಭೂಮಿಯನ್ನು ಮಂಜೂರು ಮಾಡಲು ಜಿಲ್ಲಾಧಿಕಾರಿಗಳು ಶಿಫಾರಸ್ಸು ಮಾಡಿರುತ್ತಾರೆ. ಈ 71 (18+53) ವ್ಯಕ್ತಿಗಳು ಮಂಜೂರಾದ ಸರ್ಕಾರಿ ಭೂಮಿಯನ್ನು ಖರೀದಿ ಮಾಡಿರುವುದರಿಂದ ಸದರಿ ಪ್ರಕರಣಗಳು ಪರಿಗಣಾರ್ಹವಾಗಿರುವುದಿಲ್ಲ. ಆದಕಾರಣ, ಈಗಾಗಲೇ ಭೂಮಿ ಖರೀದಿಸಿರುವ 71 ವ್ಯಕ್ತಿಗಳನ್ನು ಹೊರತುಪಡಿಸಿ, 1374.31 ಎಕರೆ ಪೈಕಿ 1265.28 ಎಕರೆಯಲ್ಲಿ ಸಾಗುವಳಿ ಮಾಡುತ್ತಿರುವ 738 ವ್ಯಕ್ತಿಗಳಿಗೆ ಮಾತ್ರ ಮಂಜೂರಾತಿ ನೀಡಲು ನಿರ್ಣಯಿಸಿದೆ.

ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಆರ್‌ಡಿ 01 ಎಲ್‌ಜಿಎಂ 2006, ಬೆಂಗಳೂರು, ದಿನಾಂಕ : 21-2-2013.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, 738 ವ್ಯಕ್ತಿಗಳಿಗೆ 1265.28 ಎಕರೆ ಪ್ರದೇಶವನ್ನು ಕರ್ನಾಟಕ ಭೂ ಮಂಜೂರಾತಿ ಅಧಿನಿಯಮ 1969ರ ನಿಯಮ 27 ರಂತೆ ಮಾರ್ಗಸೂಚಿ ದರವನ್ನು ನಿಗದಿಪಡಿಸಿ ಮಂಜೂರು ಮಾಡಲು ಹಾಗೂ ಜಮೀನಿನ ಖುಷ್ಕಿ/ತರಿ ವರ್ಗೀಕರಣವನ್ನು ಮಾನದಂಡವನ್ನಾಗಿಟ್ಟುಕೊಂಡು ನೀಡಬೇಕಾದ ಭೂಮಿಯ ಪ್ರಮಾಣವನ್ನು ದಿನಾಂಕ : 1-1-2013ರ ಪಹಣಿಯಂತೆ ನಿಗದಿಪಡಿಸಿ ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಸರ್ಕಾರದ ಮಂಜೂರಾತಿ ನೀಡಿದೆ.

1. ಮಂಜೂರಾದ ಜಮೀನನ್ನು ಯಾವ ಉದ್ದೇಶಕ್ಕೆ ಮಂಜೂರು ಮಾಡಲಾಗಿದೆಯೋ ಅದೇ ಉದ್ದೇಶಕ್ಕೆ ಎರಡು ವರ್ಷಗಳ ಅವಧಿಯೊಳಗೆ ಉಪಯೋಗಿಸತಕ್ಕದ್ದು.
2. ಮಂಜೂರಾದ ಭೂಮಿಯನ್ನು ವಿನಾಶಕಾರಿಯಾದ ಅಥವಾ ಖಾಯಂ ಆಗಿ ಹಾನಿಕಾರಕವಾಗುವ ರೀತಿಯಲ್ಲಿ ಬಳಸತಕ್ಕದ್ದಲ್ಲ.
3. ಮಂಜೂರಾದ ಜಮೀನಿನಲ್ಲಿ ಯಾವುದೇ ರೀತಿಯ ಅತಿಕ್ರಮಣವಾಗದಂತೆ ಕ್ರಮವಹಿಸತಕ್ಕದ್ದು.
4. ಮಂಜೂರು ಮಾಡಲ್ಪಡುವ ಜಮೀನಿನ ಮೇಲೆ ಯಾವುದೇ ನ್ಯಾಯಾಲಯದಲ್ಲಿ ದಾವೆಗಳು ದಾಖಲಾಗಿದ್ದಲ್ಲಿ, ಈ ಮಂಜೂರಾತಿಯು ನ್ಯಾಯಾಲಯದ ಅಂತಿಮ ಆದೇಶಕ್ಕೆ ಒಳಪಟ್ಟಿರುತ್ತದೆ.
5. ಮಂಜೂರಾದ ಜಮೀನನ್ನು ಕಂದಾಯ ಇಲಾಖೆಯ ಅನುಮತಿ ಇಲ್ಲದೆ ಮಾರಾಟ ಮಾಡುವುದಾಗಲೀ, ಗುತ್ತಿಗೆ/ಉಪಗುತ್ತಿಗೆಗೆ ನೀಡುವುದಾಗಲೀ, ಅಡಮಾನ, ವರ್ಗಾವಣೆ, ದಾನ, ಇತರೆ ಯಾವುದೇ ರೀತಿಯ ಪರಭಾರೆಯನ್ನು ಮಾಡಬಾರದು.
6. ಮಂಜೂರಾದ ಜಮೀನಿನ ಯಾವುದೇ ಭಾಗವು ಸಾರ್ವಜನಿಕ ಉದ್ದೇಶಕ್ಕೆ ಅಗತ್ಯವಾಗಿದ್ದಲ್ಲಿ, ಸರ್ಕಾರವು ಸದರಿ ಜಮೀನನ್ನು ಪರಿಹಾರ ನೀಡದೇ ಹಿಂತೆಗೆದುಕೊಳ್ಳುವ ಹಕ್ಕನ್ನು ಹೊಂದಿರುತ್ತದೆ.
7. ಮಂಜೂರಾದ ಜಮೀನು ಫಲಾನುಭವಿಗಳಿಗೆ ಅವಶ್ಯವಿಲ್ಲವೆಂದು ಕಂಡುಬಂದಲ್ಲಿ ಕಂದಾಯ ಇಲಾಖೆಗೆ ಹಿಂದಿರುಗಿಸತಕ್ಕದ್ದು.
8. ಮಂಜೂರಾದ ಜಮೀನು 1969ರ ಕರ್ನಾಟಕ ಭೂ ಮಂಜೂರಾತಿ ನಿಯಮಗಳಿಗೆ ಬದ್ಧವಾಗಿದ್ದು, ಸದರಿ ನಿಯಮಗಳ ಉಲ್ಲಂಘನೆಯಾದಲ್ಲಿ ಈ ಮಂಜೂರಾತಿ ಆದೇಶ ತನ್ನಷ್ಟಕ್ಕೆ ತಾನೇ ರದ್ದಾಗುವುದು ಹಾಗೂ ಯಾವುದೇ ಪರಿಹಾರ ನೀಡದೇ ಮಂಜೂರಾದ ಜಮೀನನ್ನು ಸರ್ಕಾರದ ವಶಕ್ಕೆ ಪಡೆಯಲಾಗುವುದು.
9. ಜಿಲ್ಲಾಧಿಕಾರಿಗಳು ಮಂಜೂರಾದ ಜಮೀನನ್ನು ಫಲಾನುಭವಿಗಳಿಗೆ ಹಸ್ತಾಂತರಿಸುವಾಗ ಮಂಜೂರಾದ ಪ್ರದೇಶದ ವಾಸ್ತವ ಪರಿಸ್ಥಿತಿಗಳನ್ನು ಗಮನದಲ್ಲಿಟ್ಟುಕೊಂಡು ಪೂರಕವಾದ ಷರತ್ತುಗಳನ್ನು ವಿಧಿಸಬಹುದಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ. ಶಿವಲಿಂಗಯ್ಯ**

ಪೀಠಾಧಿಕಾರಿ,

ಕಂದಾಯ ಇಲಾಖೆ (ಭೂ ಮಂಜೂರಾತಿ-2).

**P.R. 431**

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ :** ಗುಲ್ಬರ್ಗಾ ಜಿಲ್ಲೆ, ಆಳಂದ ತಾಲ್ಲೂಕು ಡೊಣ್ಣೂರ ಕೆರೆಗಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರ ಪಾವತಿಸುವ ಬಗ್ಗೆ.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ಪತ್ರ ಸಂಖ್ಯೆ : ಮುಇಂ/ ಸನೀ(ಉ)ವ/ಬಿಜಾ/ಭೂಸ್ವಾಪ್ರ/2012-13/5342, ದಿನಾಂಕ : 25-9-2012.

**ಪ್ರಸ್ತಾವನೆ :**

ಗುಲ್ಬರ್ಗಾ ಜಿಲ್ಲೆ, ಆಳಂದ ತಾಲ್ಲೂಕು ಡೊಣ್ಣೂರ ಕೆರೆಗಾಗಿ ಸ್ವಾಧೀನಪಡಿಸಿಕೊಳ್ಳಲಾದ ಡೊಣ್ಣೂರ ಗ್ರಾಮದ ಜಮೀನುಗಳಿಗೆ ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿದ ತೀರ್ಪಿನ ಅನುಸಾರ ಹೆಚ್ಚಿನ ಪರಿಹಾರ ಧನ ಪಾವತಿಸಲು ಅನುದಾನ ಬಿಡುಗಡೆ ಮಾಡುವಂತೆ ಮೇಲೆ ಓದಲಾದ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಕೋರಿದ್ದಾರೆ. ಹೆಚ್ಚಿನ ಪರಿಹಾರ ತೀರ್ಪು ನೀಡಿದ ಜಮೀನುಗಳ ಭೂಸ್ವಾಧೀನದ ಪ್ರಕ್ರಿಯೆಯ ವಿವರಗಳು ಈ ಕೆಳಕಂಡಂತಿದೆ.

- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ : 13–3–2003.
- ಕರ್ನಾಟಕ ಭೂಸ್ವಾಧೀನ ಕಾಯ್ದೆಯಡಿಯಲ್ಲಿ ಭೂಸ್ವಾಧೀನಾಧಿಕಾರಿಗಳು ಪರಿಹಾರ ಧನದ ಐತೀರ್ಪು ಘೋಷಿಸಿದ ದಿನಾಂಕ : 14–6–2004.

ಭೂಸ್ವಾಧೀನಾಧಿಕಾರಿಗಳ ಐತೀರ್ಪಿನಂತೆ ಪರಿಹಾರ ಪಡೆದ ಭೂಮಾಲೀಕರು ಇನ್ನೂ ಹೆಚ್ಚಿನ ಪರಿಹಾರಕ್ಕಾಗಿ ಆಳಂದ ಸಿವಿಲ್ ನ್ಯಾಯಾಲಯ (ಹಿರಿಯ ಶ್ರೇಣಿ)ದಲ್ಲಿ ದಾಖಲಿಸಿದ್ದ ಎಲ್.ಎ.ಸಿ. ಸಂಖ್ಯೆ : 36/2006 ಹಾಗೂ ಇನ್ನಿತರ ಪ್ರಕರಣಗಳಲ್ಲಿ ಮಾನ್ಯ ನ್ಯಾಯಾಲಯವು ನೀಡಿರುವ ಆದೇಶಗಳಲ್ಲಿ ಪ್ರತಿ ಎಕರೆಗೆ ರೂ. 81,360/–ಗಳ ಭೂಮೌಲ್ಯವನ್ನು ನಿಗದಿಪಡಿಸಿದೆ. ಈ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸದಿರಲು ಕಂದಾಯ ಇಲಾಖೆಯ ಕಾನೂನು ಕೋಶವು ಕೆಳಕಂಡ ಪತ್ರಗಳಲ್ಲಿ ಅಭಿಪ್ರಾಯ ನೀಡಿದೆ.

| | |
|---|---|
| 1. | ಆರ್‌ಡಿ 976 ಎಲ್‌ಸಿಬಿ 2010, ದಿನಾಂಕ : 19–12–2012. |
| 2. | ಆರ್‌ಡಿ 975 ಎಲ್‌ಸಿಬಿ 2010, ದಿನಾಂಕ : 19–12–2012. |
| 3. | ಆರ್‌ಡಿ 982 ಎಲ್‌ಸಿಬಿ 2010, ದಿನಾಂಕ : 19–12–2012. |
| 4. | ಆರ್‌ಡಿ 979 ಎಲ್‌ಸಿಬಿ 2010, ದಿನಾಂಕ : 19–12–2012. |
| 5. | ಆರ್‌ಡಿ 981 ಎಲ್‌ಸಿಬಿ 2010, ದಿನಾಂಕ : 19–12–2012. |
| 6. | ಆರ್‌ಡಿ 980 ಎಲ್‌ಸಿಬಿ 2010, ದಿನಾಂಕ : 19–12–2012. |
| 7. | ಆರ್‌ಡಿ 977 ಎಲ್‌ಸಿಬಿ 2010, ದಿನಾಂಕ : 19–12–2012. |
| 8. | ಆರ್‌ಡಿ 984 ಎಲ್‌ಸಿಬಿ 2010, ದಿನಾಂಕ : 19–12–2012. |
| 9. | ಆರ್‌ಡಿ 983 ಎಲ್‌ಸಿಬಿ 2010, ದಿನಾಂಕ : 19–12–2012. |
| 10. | ಆರ್‌ಡಿ 985 ಎಲ್‌ಸಿಬಿ 2010, ದಿನಾಂಕ : 19–12–2012. |
| 11. | ಆರ್‌ಡಿ 978 ಎಲ್‌ಸಿಬಿ 2010, ದಿನಾಂಕ : 19–12–2012. |
| 12. | ಆರ್‌ಡಿ 132 ಎಲ್‌ಸಿಬಿ 2011, ದಿನಾಂಕ : 9–2–2012. |

ನ್ಯಾಯಾಲಯವು ಹೆಚ್ಚಿನ ಪರಿಹಾರಕ್ಕೆ ತೀರ್ಪು ನೀಡಿರುವ ಪ್ರಕರಣಗಳ ವಿವರ ಕೆಳಕಂಡಂತಿದೆ :

| ಕ್ರ. ಸಂ. | ಎಲ್ಎಸಿ | ಎಲ್ಎಸಿಎ | ಡೊಣ್ಣೂರ ಗ್ರಾಮದ ಸ.ನಂ. | ವಿಸ್ತೀರ್ಣ ಎ–ಗುಂ | ಪರಿಹಾರ ಮೊತ್ತ ರೂ.ಗಳಲ್ಲಿ |
|---|---|---|---|---|---|
| 1. | 36/2006 | – | 62/5 | 0–12 | 54484 |
| 2. | 37/2006 | – | 62/17 | 0–02 | 9081 |
| 3. | 38/2006 | – | 53/9 | 0–16 | 72645 |
| 4. | 39/2006 | – | 56/6 | 0–02 | 9081 |
| 5. | 40/2006 | – | 62/16 | 0–02 | 9081 |
| 6. | 41/2006 | – | 57/6 | 0–13 | 59024 |
| 7. | 42/2006 | – | 53/8 | 0–20 | 90806 |
| 8. | 43/2006 | – | 62/21 | 0–06 | 27242 |
| 9. | 44/2006 | – | 63/2 | 6–00 | 1089670 |
| 10. | 45/2006 | – | 66/19 | 0–25 | 113507 |
| 11. | 46/2006 | – | 56/5 | 0–35 | 158910 |
| 12. | 47/2006 | | 110/4 | 3–07 | 576617 |
| 13. | 49/2006 | – | 113/13 | 0–09 | 40863 |

| ಕ್ರ. ಸಂ. | ಎಲ್‌ಎಸಿ | ಎಲ್‌ಎಸಿಎ | ಡೊಣ್ಣೂರ ಗ್ರಾಮದ ಸ.ನಂ. | ವಿಸ್ತೀರ್ಣ ಎ–ಗುಂ | ಪರಿಹಾರ ಮೊತ್ತ ರೂ.ಗಳಲ್ಲಿ |
|---|---|---|---|---|---|
| 14. | 54/2006 | – | 65/1 | 3–04 | 562996 |
| 15. | 44/2006 | 157/2010 | 63/2 | 6–00 | 519019 |
| 16. | 45/2006 | 158/2010 | 66/19 | 0–25 | 54064 |
| 17. | 46/2006 | 159/2010 | 56/5 | 0–35 | 75690 |
| 18. | 47/2006 | 160/2010 | 110/4 | 3–07 | 274647 |
| 19. | 54/2006 | 161/2010 | 65/1 | 3–04 | 268160 |
| | ಒಟ್ಟು | | | | **4065586** |

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸನೀಇ 138 ಭೂಸ್ವಾಪ್ರ 2012, ಬೆಂಗಳೂರು, ದಿನಾಂಕ : 23ನೇ ಫೆಬ್ರವರಿ, 2013.**

ಗುಲ್ಬರ್ಗಾ ಜಿಲ್ಲೆ, ಆಳಂದ ತಾಲ್ಲೂಕು ಡೊಣ್ಣೂರ ಕೆರೆಗಾಗಿ ಸ್ವಾಧೀನಪಡಿಸಿಕೊಳ್ಳಲಾದ ಡೊಣ್ಣೂರ ಗ್ರಾಮಕ್ಕೆ ಸೇರಿದ ಮೇಲ್ಕಂಡ ಸರ್ವೆ ನಂಬರ್‌ಗಳ ಜಮೀನುಗಳಿಗೆ ನ್ಯಾಯಾಲಯವು ನೀಡಿರುವ ತೀರ್ಪಿನಂತೆ ಹಾಗೂ ಭೂಸ್ವಾಧೀನ ಕಾಯ್ದೆಯಲ್ಲಿಯ ಸೂಚನೆಗಳಂತೆ ಲೆಕ್ಕಾಹಾಕಿದ ಪರಿಹಾರ ಮೊತ್ತ ರೂ. 40,65,586–00ಗಳನ್ನು (ನಲವತ್ತು ಲಕ್ಷದ ಅರವತ್ತೈದು ಸಾವಿರದ ಐನೂರ ಎಂಭತ್ತಾರು ರೂ.ಗಳು ಮಾತ್ರ) ಪಾವತಿಸಲು ಸರ್ಕಾರವು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಅನುಮೋದನೆ ನೀಡಿದೆ.

1. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತಃಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.
2. ಹೆಚ್ಚುವರಿ ಪರಿಹಾರಧನದ ಪಾವತಿಗೆ ಮೊದಲು ಜಮೀನಿನ ಹಕ್ಕುದಾರಿಕೆ ಬಗ್ಗೆ ಖಚಿತಪಡಿಸಿಕೊಂಡು ಪಾವತಿಸತಕ್ಕದ್ದು.
3. ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗಿದ್ದಲ್ಲಿ, ಸಂಬಂಧಿಸಿದ ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರು ವರ್ಗಾವಣೆ ಬಗ್ಗೆ ಕೂಡಲೇ ಕ್ರಮ ಕೈಗೊಳ್ಳತಕ್ಕದ್ದು.

ಈ ವೆಚ್ಚವನ್ನು 2012–13ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ "4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು" ಅಡಿಯಲ್ಲಿ ಒದಗಿಸಿರುವ ಅನುದಾನದಿಂದ ರೂ. 40,65,586/–ಗಳನ್ನು ಹಂಚಿಕೆ ಮಾಡಿ ಬಿಡುಗಡೆ ಮಾಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 2010, ದಿನಾಂಕ : 20–10–10ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಕೆ.ಸಿ. ಸಿದ್ದಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ,
ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ).

**P.R. 433**

## ಕಂದಾಯ ಸಚಿವಾಲಯ

**ವಿಷಯ :** ಚಿಕ್ಕಮಗಳೂರು ತಾಲ್ಲೂಕು ಅಂಬಳೆ ಹೋಬಳಿ, ಮರ್ಲೆ ಗ್ರಾಮದ ಸ.ನಂ. 134 ರಲ್ಲಿ 9–20 ಎಕರೆ ಜಮೀನನ್ನು ಇಟ್ಟಿಗೆ ಕಾರ್ಖಾನೆಗೆ ಮೆ: ಸನ್ ಸಿಮೆಂಟ್ ಬ್ರಿಕ್ ಇಂಡಸ್ಟ್ರೀಸ್ ಚಿಕ್ಕಮಗಳೂರು ಇವರಿಗೆ ಗುತ್ತಿಗೆ ನೀಡುವ ಬಗ್ಗೆ.

**ಓದಲಾಗಿದೆ :** ಪ್ರಾದೇಶಿಕ ಆಯುಕ್ತರು, ಮೈಸೂರು ವಿಭಾಗ, ಮೈಸೂರು ಇವರ ಪತ್ರ ಸಂಖ್ಯೆ : ಎಲ್‌ಎನ್‌ಡಿ (2) ಸಿಆರ್ : 31/2011–12, ದಿನಾಂಕ : 8–2–2012.

**ಪ್ರಸ್ತಾವನೆ :**

ಪ್ರಾದೇಶಿಕ ಆಯುಕ್ತರು, ಮೈಸೂರು ವಿಭಾಗ, ಮೈಸೂರು ಇವರು ಮೇಲೆ ಓದಲಾದ ದಿನಾಂಕ : 8–2–2012ರ ಪತ್ರದಲ್ಲಿ ಚಿಕ್ಕಮಗಳೂರು ತಾಲ್ಲೂಕು, ಅಂಬಳೆ ಹೋಬಳಿ ಮರ್ಲೆ ಗ್ರಾಮದ ರಿ.ಸ.ನಂ. 134ರ 9–20 ಎಕರೆ ಜಮೀನನ್ನು ಮೆ॥ ಸನ್ ಸಿಮೆಂಟ್ ಇಂಡಸ್ಟ್ರೀಸ್, ಚಿಕ್ಕಮಗಳೂರು ಇವರಿಗೆ ಗುತ್ತಿಗೆ ಆಧಾರದ ಮೇಲೆ ಮಂಜೂರು ಮಾಡುವ ಬಗ್ಗೆ ಜಿಲ್ಲಾಧಿಕಾರಿಗಳು ಸಲ್ಲಿಸಿರುವ ಪ್ರಸ್ತಾವನೆಯನ್ನು ಮುಂದಿನ ಕ್ರಮಕ್ಕಾಗಿ ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ಪ್ರಾದೇಶಿಕ ಆಯುಕ್ತರು ಹಾಗೂ ಜಿಲ್ಲಾಧಿಕಾರಿಗಳು ಸಲ್ಲಿಸಿರುವ ಪ್ರಸ್ತಾವನೆಯನುಸಾರ ಚಿಕ್ಕಮಗಳೂರು ತಾಲ್ಲೂಕು ಅಂಬಳೆ ಹೋಬಳಿ ಮರ್ಲೆ ಗ್ರಾಮದ ರಿ.ಸ.ನಂ. 134ರಲ್ಲಿ ಒಟ್ಟು 413–12 ಎಕರೆ ಜಮೀನು, ಈ ಪೈಕಿ 3 ಜನರಿಗೆ 2–30 ಎಕರೆ ಮಂಜೂರಾದ ಜಮೀನಾಗಿದ್ದು, 60 ಎಕರೆ ಅರಣ್ಯ ಇಲಾಖೆಗೆ ಸೇರಿದ ಜಮೀನು, 254–22 ಎಕರೆ ಜಮೀನು ಗೋಮಾಳ ಜಮೀನಾಗಿರುತ್ತದೆ. ಸದರಿ ಗ್ರಾಮದಲ್ಲಿ ಒಟ್ಟು 741–11 ಎಕರೆ ಗೋಮಾಳ ಜಮೀನಿದ್ದು, ಜಾನುವಾರುಗಳ ಸಂಖ್ಯೆ 550 ಆಗಿರುತ್ತದೆ. ಜಾನುವಾರುಗಳಿಗನುಗುಣವಾಗಿ ಗೋಮಾಳ ಜಮೀನಿದ್ದು, ಪ್ರಸ್ತುತ ಜಮೀನನ್ನು ಕಾರ್ಖಾನೆಗೆ ಗುತ್ತಿಗೆ ಆಧಾರದ ಮೇಲೆ ಮಂಜೂರು ಮಾಡಬಹುದಾಗಿದೆ. ಎಂದು ಜಿಲ್ಲಾಧಿಕಾರಿಗಳು ಶಿಫಾರಸ್ಸು ಮಾಡಿರುತ್ತಾರೆ. ಕರ್ನಾಟಕ ಭೂ ಕಂದಾಯ ನಿಯಮಾವಳಿ 1966 ನಿಯಮ 97(4) ರನ್ವಯ ಗೋಮಾಳ ಜಮೀನು ನಿಯಮ 97(1)ರಲ್ಲಿ ನಿಗದಿಪಡಿಸಿರುವ ವಿಸ್ತೀರ್ಣಕ್ಕಿಂತ ಹೆಚ್ಚಾಗಿದ್ದಲ್ಲಿ ಅದನ್ನು ವಿರಹಿತಗೊಳಿಸಲು ಜಿಲ್ಲಾಧಿಕಾರಿಯವರಿಗೆ ಅವಕಾಶ ಇರುತ್ತದೆ.

2. ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969ರ ನಿಯಮ 19(1)(ಡಿ) ರನ್ವಯ ಕೈಗಾರಿಕಾ ಉದ್ದೇಶಕ್ಕಾಗಿ ಗುತ್ತಿಗೆ ಆಧಾರದ ಮೇಲೆ ಜಮೀನು ಮಂಜೂರು ಮಾಡಲು ಅವಕಾಶ ಇರುವುದಾದರೂ ಆ ಸಂಸ್ಥೆಯು 5 ವರ್ಷಗಳಿಂದ ಅಸ್ತಿತ್ವದಲ್ಲಿರಬೇಕಾಗಿರುತ್ತದೆ. ಅದರೆ ಸದರಿ ಪ್ರಕರಣದಲ್ಲಿ ಮಂಜೂರಾತಿ ಕೋರಿರುವ ಸಂಸ್ಥೆಯು ದಿನಾಂಕ: 9–9–2010ರಲ್ಲಿ ನೋಂದಣಿಯಾಗಿರುತ್ತದೆ.

3. ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿದೆ. ಅದರಂತೆ ಈ ಆದೇಶ :–

**ಸರ್ಕಾರದ ಆದೇಶ ಸಂಖ್ಯೆ : ಆರ್‌ಡಿ 34 ಎಲ್‌ಜಿಯು 2012, ಬೆಂಗಳೂರು, ದಿನಾಂಕ : 25–2–2013.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಮೆ॥ ಸನ್ ಸಿಮೆಂಟ್ ಇಂಡಸ್ಟ್ರೀಸ್‌ರವರಿಗೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969ರ ನಿಯಮ 27 ರಲ್ಲಿನ ಅಧಿಕಾರವನ್ನು ಚಲಾಯಿಸಿ ನಿಯಮ 19(1)(ಡಿ) ನ್ನು ಸಡಿಲಿಸಿ ಸದರಿ ಸಂಸ್ಥೆಗೆ ಚಿಕ್ಕಮಗಳೂರು ತಾಲ್ಲೂಕು, ಅಂಬಳೆ ಹೋಬಳಿ ಮರ್ಲೆ ಗ್ರಾಮದ ರಿ.ಸ.ನಂ. 134ರಲ್ಲಿ 9–20 ಎಕರೆ ಜಮೀನನ್ನು ಗೋಮಾಳ ಶೀರ್ಷಿಕೆಯಿಂದ ತಗ್ಗಿಸಿ, ಪ್ರಸಕ್ತ ಮಾರುಕಟ್ಟೆ ದರದ ಶೇ. 10 ರಷ್ಟನ್ನು ಗುತ್ತಿಗೆ ದರ ನಿಗದಿಪಡಿಸಿ 30 ವರ್ಷಗಳ ಅವಧಿಗೆ ಗುತ್ತಿಗೆ ಆಧಾರದ ಮೇಲೆ ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಮಂಜೂರು ಮಾಡಲು ಆದೇಶಿಸಿದೆ.

1. ಮಂಜೂರಾದ ಭೂಮಿಯನ್ನು ಯಾವ ಉದ್ದೇಶಕ್ಕೆ ಮಂಜೂರು ಮಾಡಲಾಗಿದೆಯೋ ಅದೇ ಉದ್ದೇಶಕ್ಕೆ ಎರಡು ವರ್ಷಗಳ ಅವಧಿಯೊಳಗೆ ಉಪಯೋಗಿಸತಕ್ಕದ್ದು.
2. ಮಂಜೂರಾದ ಭೂಮಿಯನ್ನು ವಿನಾಶಕಾರಿಯಾದ ಅಥವಾ ಖಾಯಂ ಆಗಿ ಹಾನಿಕಾರಕವಾಗುವ ರೀತಿಯಲ್ಲಿ ಬಳಸತಕ್ಕದ್ದಲ್ಲ.
3. ಮಂಜೂರಾದ ಜಮೀನಿನಲ್ಲಿ ಯಾವುದೇ ರೀತಿಯ ಅತಿಕ್ರಮಣವಾಗದಂತೆ ಕ್ರಮವಹಿಸತಕ್ಕದ್ದು.
4. ಮಂಜೂರು ಮಾಡಲ್ಪಡುವ ಜಮೀನಿನ ಮೇಲೆ ಯಾವುದೇ ನ್ಯಾಯಾಲಯದಲ್ಲಿ ದಾವೆಗಳು ದಾಖಲಾಗಿದ್ದಲ್ಲಿ, ಈ ಮಂಜೂರಾತಿಯು ನ್ಯಾಯಾಲಯದ ಅಂತಿಮ ಆದೇಶಕ್ಕೆ ಒಳಪಟ್ಟಿರುತ್ತದೆ.
5. ಮಂಜೂರಾದ ಜಮೀನನ್ನು ಕಂದಾಯ ಇಲಾಖೆಯ ಅನುಮತಿ ಇಲ್ಲದೆ ಮಾರಾಟ ಮಾಡುವುದಾಗಲೀ, ಗುತ್ತಿಗೆ/ಉಪಗುತ್ತಿಗೆ ನೀಡುವುದಾಗಲೀ, ಅಡಮಾನ, ವರ್ಗಾವಣೆ, ದಾನ, ಇತರೆ ಯಾವುದೇ ರೀತಿಯ ಪರಭಾರೆಯನ್ನು ಮಾಡಬಾರದು.
6. ಮಂಜೂರಾದ ಜಮೀನಿನ ಯಾವುದೇ ಭಾಗವು ಸಾರ್ವಜನಿಕ ಉದ್ದೇಶಕ್ಕೆ ಅಗತ್ಯವಾಗಿದ್ದಲ್ಲಿ ಸರ್ಕಾರವು ಸದರಿ ಜಮೀನನ್ನು ಪರಿಹಾರ ನೀಡದೇ ಹಿಂತೆಗೆದುಕೊಳ್ಳುವ ಹಕ್ಕನ್ನು ಹೊಂದಿರುತ್ತದೆ.
7. ಮಂಜೂರಾದ ಜಮೀನು ಸಂಸ್ಥೆಗೆ ಅವಶ್ಯವಿಲ್ಲವೆಂದು ಕಂಡುಬಂದಲ್ಲಿ ಕಂದಾಯ ಇಲಾಖೆಗೆ ಹಿಂತಿರುಗಿಸತಕ್ಕದ್ದು.
8. ಮಂಜೂರಾದ ಜಮೀನಿನಲ್ಲಿ ಅಭಿವೃದ್ಧಿ ಕಾರ್ಯಗಳನ್ನು ಪ್ರಾರಂಭಿಸುವ ಪೂರ್ವದಲ್ಲಿ ಶಾಸನಬದ್ಧವಾಗಿ ಪಡೆಯಬೇಕಾದ ಪರವಾನಗಿಗಳನ್ನು ಸಂಬಂಧಿತ ಪ್ರಾಧಿಕಾರಗಳಿಂದ ಪಡೆಯತಕ್ಕದ್ದು ಹಾಗೂ ನಿಯಮಾನುಸಾರ ಪಾವತಿಸಬೇಕಾದ ಎಲ್ಲಾ ರೀತಿಯ ಶುಲ್ಕಗಳನ್ನು ಕಡ್ಡಾಯವಾಗಿ ಪಾವತಿಸತಕ್ಕದ್ದು.
9. ಮಂಜೂರಾದ ಜಮೀನು 1969ರ ಕರ್ನಾಟಕ ಭೂ ಮಂಜೂರಾತಿ ನಿಯಮಗಳಿಗೆ ಬದ್ಧವಾಗಿದ್ದು, ಸದರಿ ನಿಯಮಗಳ ಉಲ್ಲಂಘನೆಯಾದಲ್ಲಿ ಈ ಮಂಜೂರಾತಿ ಆದೇಶ ತನ್ನಷ್ಟಕ್ಕೆ ತಾನೇ ರದ್ದಾಗುವುದು ಹಾಗೂ ಯಾವುದೇ ಪರಿಹಾರ ನೀಡದೇ ಮಂಜೂರಾದ ಜಮೀನನ್ನು ಸರ್ಕಾರದ ವಶಕ್ಕೆ ಪಡೆಯಲಾಗುವುದು.
10. ಜಿಲ್ಲಾಧಿಕಾರಿಗಳು ಮಂಜೂರಾದ ಜಮೀನನ್ನು ಫಲಾನುಭವಿಗಳಿಗೆ ಹಸ್ತಾಂತರಿಸುವಾಗ ಮಂಜೂರಾದ ಪ್ರದೇಶದ ವಾಸ್ತವ ಪರಿಸ್ಥಿತಿಗಳನ್ನು ಗಮನದಲ್ಲಿಟ್ಟುಕೊಂಡು ಪೂರಕವಾದ ಷರತ್ತುಗಳನ್ನು ವಿಧಿಸಬಹುದಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ. ಶಿವಲಿಂಗಯ್ಯ**

ಪೀಠಾಧಿಕಾರಿ,

ಕಂದಾಯ ಇಲಾಖೆ (ಭೂ.ಮಂ–2).

**P.R. 434**

## ಮೂಲಸೌಲಭ್ಯ ಅಭಿವೃದ್ಧಿ ಸಚಿವಾಲಯ

**ವಿಷಯ:** ಬೀದರ್ ನಗರದಲ್ಲಿ ರೈಲ್ವೆ ಲೆವೆಲ್ ಕ್ರಾಸಿಂಗ್ ಸಂಖ್ಯೆ 43A ರಲ್ಲಿ ಅಶೋಕ ಹೋಟೆಲ್ ಹತ್ತಿರ ರಸ್ತೆ ಕೆಳ ಸೇತುವೆಯ ಅಪ್ರೋಚ್ ರಸ್ತೆ ನಿರ್ಮಾಣ ಮಾಡಲು ಆಡಳಿತಾತ್ಮಕ ಮಂಜೂರಾತಿ ನೀಡುವ ಬಗ್ಗೆ.

**ಓದಲಾಗಿದೆ:**
1. ಪತ್ರ ಸಂಖ್ಯೆ : ಮುಇಂ (ಉ)/ ತಾಸ–4/ಸಇಂ–1/ಬೀದರ್/2011–12/05519, ದಿನಾಂಕ 6.09.2011 ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ಉತ್ತರ), ಧಾರವಾಡ ಇವರಿಂದ.
2. ಸರ್ಕಾರದ ಪತ್ರ ಸಂಖ್ಯೆ ಮೂಅಇ 63 ರಾರಾಹೆ 2009, ದಿನಾಂಕ 17–11–2011.
3. ಪತ್ರ ಸಂಖ್ಯೆ: ಮುಇಂ (ಉ)/ ತಾಸ–4/ಸಇಂ–1/ಬೀದರ್/2011–12/09374, ದಿನಾಂಕ 13.12.2011 ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ಉತ್ತರ), ಧಾರವಾಡ ಇವರಿಂದ.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರ.ಸಂ. (1)ರ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ಉತ್ತರ), ಧಾರವಾಡ ಇವರು ರೈಲ್ವೆ ಮತ್ತು ರಾಜ್ಯ ಸರ್ಕಾರದ ಸಹಭಾಗಿತ್ವದಲ್ಲಿ ಬೀದರ್ ನಗರದಲ್ಲಿನ ರೈಲು ಮಾರ್ಗದಲ್ಲಿ ಬರುವ ಲೆವೆಲ್ ಕ್ರಾಸಿಂಗ್ ಸಂಖ್ಯೆ 43A ರಲ್ಲಿ (ಅಶೋಕ ಹೋಟೆಲ್ ಹತ್ತಿರ) ರಸ್ತೆ

ಕೆಳ ಸೇತುವೆಯ ಕೂಡು ರಸ್ತೆಗಳ ನಿರ್ಮಾಣಕ್ಕೆ ಅಂದಾಜು ವೆಚ್ಚ ರೂ.580.00 ಲಕ್ಷಗಳಾಗುತ್ತದೆಂದು ತಿಳಿಸುತ್ತಾ, ಈ ಕಾಮಗಾರಿಯನ್ನು ಕೈಗೆತ್ತಿಕೊಳ್ಳಲು ಆಡಳಿತಾತ್ಮಕ ಅನುಮೋದನೆಯನ್ನು ನೀಡುವಂತೆ ಕೋರಿರುತ್ತಾರೆ.

2. ಮೇಲೆ ಓದಲಾದ ಕ್ರ.ಸಂ. (2)ರ ಸರ್ಕಾರದ ಪತ್ರದಲ್ಲಿ ಬೀದರ್ ನಗರದಲ್ಲಿನ ವಿವಿಧ ಎಲ್.ಸಿ.ಗಳ ಬದಲಿಗೆ ರಸ್ತೆ ಕೆಳಸೇತುವೆ ನಿರ್ಮಾಣ ಮಾಡುವ ಬಗ್ಗೆ ಕ್ರೋಢೀಕೃತ ಅಂದಾಜು ಪಟ್ಟಿಯನ್ನು ತಯಾರಿಸಿ ರೈಲ್ವೆಯ ಮೇಲು ಸಹಿಯೊಂದಿಗೆ ಪ್ರಸ್ತಾವನೆಯನ್ನು ಕಳುಹಿಸುವಂತೆ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ಉತ್ತರ), ಧಾರವಾಡ ಇವರನ್ನು ಕೋರಲಾಗಿತ್ತು.

3. ಮೇಲೆ ಓದಲಾದ ಕ್ರ.ಸಂ. (3)ರ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ಉತ್ತರ), ಧಾರವಾಡ ಇವರು 3 ರಸ್ತೆ ಕೆಳ ಸೇತುವೆಗಳಿಗೆ ಕೂಡು ರಸ್ತೆ ನಿರ್ಮಾಣದ ಕಾಮಗಾರಿಗಳು ಬೀದರ್ ನಗರದಲ್ಲಿ ಬೇರೆ ಬೇರೆ ಸ್ಥಳಗಳಲ್ಲಿದ್ದು, ಈ ರಸ್ತೆ ಕೆಳಸೇತುವೆಗಳ ಕೂಡು ರಸ್ತೆ ಹಾಗೂ ಕೂಡು ರಸ್ತೆ ನಿರ್ಮಾಣದಲ್ಲಿ ಬರುವ ಯುಟಿಲಿಟಿಗಳನ್ನು ಸ್ಥಳಾಂತರಿಸುವ ಬಗ್ಗೆ ಕ್ರೋಢೀಕೃತ ಅಂದಾಜು ಪಟ್ಟಿಯನ್ನು ತಯಾರಿಸಲು ಸಾಧ್ಯವಾಗುವುದಿಲ್ಲವೆಂದು ತಿಳಿಸುತ್ತಾ, ರಸ್ತೆ ಕೆಳಸೇತುವೆಗಳ ಕೂಡು ರಸ್ತೆ ಹಾಗೂ ಯುಟಿಲಿಟಿ ಸ್ಥಳಾಂತರಿಸುವ ಬಗ್ಗೆ ಪ್ರಸ್ತಾವನೆಯ ವಿವರಗಳು ಕೆಳಕಂಡಂತಿದ್ದು, ಈ ಕಾಮಗಾರಿಯನ್ನು ಕೈಗೆತ್ತಿಕೊಳ್ಳಲು ಅಂದಾಜು ವೆಚ್ಚ ರೂ. 580.00 ಲಕ್ಷಗಳಿಗೆ ಆಡಳಿತಾತ್ಮಕ ಅನುಮೋದನೆಯನ್ನು ನೀಡುವಂತೆ ಕೋರಿರುತ್ತಾರೆ.

| | | | (ಲಕ್ಷ ರೂ.ಗಳಲ್ಲಿ) |
|---|---|---|---|
| 1) | ಕೂಡು ರಸ್ತೆ ನಿರ್ಮಾಣ | – | 220.00 |
| 2) | ಭೂಸ್ವಾಧೀನ | – | 202.37 |
| 3) | ವಿದ್ಯುತ್ ಕಂಬಗಳ ಸ್ಥಳಾಂತರ | – | 1.20 |
| 4) | ನೀರು ಸರಬರಾಜು ಮತ್ತು ಪೈಪ್ ಸ್ಥಳಾಂತರ | – | 30.00 |
| 5) | ಹಾಲಿ ಕಟ್ಟಡದ ತೆರವುಗೊಳಿಸಲು | – | 95.00 |
| 6) | ಓ.ಎಫ್.ಸಿ. ಕೇಬಲ್ ಸ್ಥಳಾಂತರ | – | 5.00 |
| 7) | ಸರ್ವಿಸ್ ರಸ್ತೆ ನಿರ್ಮಾಣ | – | 20.00 |
| 8) | ಟೆಂಡರ್ ಪ್ರೀಮಿಯಂ | – | 6.43 |
| | | **ಒಟ್ಟು** | **580.00** |

4. ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಮೂಅಇ 52 ರಾರಾಹೆ 2011, ಬೆಂಗಳೂರು, ದಿನಾಂಕ : 19–07–2012**

ಪ್ರಸಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಬೀದರ್ ನಗರದಲ್ಲಿನ ರೈಲು ಮಾರ್ಗದ ಮಧ್ಯದಲ್ಲಿ ಬರುವ ಲೆವೆಲ್ ಕ್ರಾಸಿಂಗ್ ಸಂಖ್ಯೆ 43A ರಲ್ಲಿ (ಅಶೋಕ ಹೋಟೆಲ್ ಹತ್ತಿರ) ರಸ್ತೆ ಕೆಳಸೇತುವೆಯ ಕೂಡು ರಸ್ತೆಯ ನಿರ್ಮಾಣದ ಕಾಮಗಾರಿಯನ್ನು ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆಯಿಂದ ಕೈಗೆತ್ತಿಕೊಳ್ಳಲು ರೂ. 580.00 (ರೂಪಾಯಿ ಐನೂರ ಎಂಬತ್ತು ಲಕ್ಷಗಳು ಮಾತ್ರ) ಲಕ್ಷಗಳ ಅಂದಾಜು ವೆಚ್ಚಕ್ಕೆ ಭೂಸ್ವಾಧೀನ ವೆಚ್ಚವನ್ನು ಹೊರತುಪಡಿಸಿ ರಾಜ್ಯ ಹಾಗೂ ರೈಲ್ವೆ ಮಂತ್ರಾಲಯ ಶೇಕಡ 50:50 ರಷ್ಟು ವೆಚ್ಚ ಭರಿಸಲು ಈ ಕೆಳಕಂಡ ಷರತ್ತಿಗಳಿಗೊಳಪಟ್ಟು ಆಡಳಿತಾತ್ಮಕ ಅನುಮೋದನೆಯನ್ನು ನೀಡಲಾಗಿದೆ.

- ಆಡಳಿತಾತ್ಮಕ ಅನುಮೋದನೆ ನೀಡಿರುವ ವೆಚ್ಚಕ್ಕೆ ಕಾಮಗಾರಿಯನ್ನು ಪೂರ್ಣಗೊಳಿಸತಕ್ಕದ್ದು.
- ಯೋಜನೆಗೆ ಕಾಲಮಿತಿಯನ್ನು ನಿಗದಿಪಡಿಸಿ ಆ ಅವಧಿಯೊಳಗೆ ಕಾಮಗಾರಿಯನ್ನು ಪೂರ್ಣಗೊಳಿಸತಕ್ಕದ್ದು.
- ಕಾಮಗಾರಿಯಲ್ಲಿ ಹೆಚ್ಚಳ/ಪರಿಷ್ಕೃತ ಅಂದಾಜು ವೆಚ್ಚವನ್ನು ಸರ್ಕಾರವು ಪರಿಗಣಿಸುವುದಿಲ್ಲ.
- ಕಾಮಗಾರಿಯನ್ನು ನಿಗದಿತ ಅವಧಿಯೊಳಗೆ ಪೂರ್ಣಗೊಳಿಸದಿದ್ದಲ್ಲಿ ಲೋಕೋಪಯೋಗಿ ಇಲಾಖೆಯೇ ಹೆಚ್ಚುವರಿ ಮೊತ್ತವನ್ನು ಭರಿಸತಕ್ಕದ್ದು.
- ಕಾಮಗಾರಿಯನ್ನು ಕೈಗೆತ್ತಿಕೊಳ್ಳುವಾಗ ಕೆಟಿಪಿಪಿ ಕಾಯ್ದೆಯನ್ನು ಕಡ್ಡಾಯವಾಗಿ ಪಾಲಿಸತಕ್ಕದ್ದು.

2. ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಆಇ 284 ವೆಚ್ಚ–1/2012, ದಿನಾಂಕ 07–04–2012 ರಲ್ಲಿ ನೀಡಿರುವ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಸ್.ಜೆ. ಸಂಪತ್ ಕುಮಾರ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ.

**P.R. 453**

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಬಿ.ಎಸ್. ಬೆಳ್ಳಿಯಪ್ಪ, ನಿವೃತ್ತ ಎ.ಸಿ.ಪಿ. ರವರಿಗೆ ವಿಧಿಸಿದ್ದ ದಂಡನೆ ಮಾರ್ಪಡಿಸುವ ಬಗ್ಗೆ.

**ಓದಲಾಗಿದೆ:**

1. ಸರ್ಕಾರದ ಆದೇಶ ಸಂಖ್ಯೆ : ಒಸಾಇ 287 ಪೊಸಿಪ 2002, ದಿನಾಂಕ 28–11–2002.
2. ಕರ್ನಾಟಕ ಆಡಳಿತ ನ್ಯಾಯ ಮಂಡಳಿಯ ಆದೇಶ ದಿನಾಂಕ 23–05–2007.
3. ಪೊಲೀಸ್ ಮಹಾ ನಿರ್ದೇಶಕರು, ಬೆಂಗಳೂರು ರವರ ಪತ್ರ ಸಂಖ್ಯೆ : ಸಿಬಿ (5) 29/ 2002–03, ದಿನಾಂಕ 26–07–07.
4. ಸರ್ಕಾರದ ಆದೇಶ ಸಂಖ್ಯೆ : ಒಇ 201 ಪೊಸಇ 2007, ದಿನಾಂಕ 01–01–2008.
5. ಪೊಲೀಸ್ ಮಹಾ ನಿರ್ದೇಶಕರು, ಬೆಂಗಳೂರು ರವರ ಪತ್ರ ಸಂಖ್ಯೆ : ಸಿಬಿ (5) 29/ 2002–03, ದಿನಾಂಕ 28–09–2010.
6. ಕಾರಣ ಕೇಳುವ ನೋಟೀಸ್ : ಸಂಖ್ಯೆ ಒಇ 201 ಪೊಸಇ 2007, ದಿನಾಂಕ 12.09.2011.
7. ಸಮ ಸಂಖ್ಯೆಯ ಪತ್ರ ದಿನಾಂಕ 28–11–2012.
8. ಕಾರ್ಯದರ್ಶಿ, ಕರ್ನಾಟಕ ಲೋಕಸೇವಾ ಆಯೋಗ ಇವರ ಪತ್ರ ಸಂಖ್ಯೆ: ಪಿಎಸ್‌ಸಿ 154/ ಸಿಎನ್‌ಎಸ್ 12, ದಿನಾಂಕ 29–01–2013.

**ಪ್ರಸ್ತಾವನೆ:**

ಶ್ರೀ ಬಿ.ಎಸ್. ಬೆಳ್ಳಿಯಪ್ಪ ಇವರು ಈ ಹಿಂದೆ ಸಹಾಯಕ ಆಯುಕ್ತರು (ಟ್ರಾಫಿಕ್) (ಪಶ್ಚಿಮ) ವಿಭಾಗ, ಬೆಂಗಳೂರು ನಗರ, ಈ ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ಇವರು ತಮ್ಮ ಇತರ ಸಹೋದ್ಯೋಗಿಗಳೊಂದಿಗೆ ಸೇರಿ, ಶ್ರೀ ಸಯಿನುದ್ದೀನ್ ಎಂಬ ಕ್ಯಾಲಿಕಟ್ (ಕಲ್ಲಿಕೋಟೆ)ಯ ಚಿನ್ನದ ವ್ಯಾಪಾರಿಗೆ ಸೇರಿದ ರೂ.19.00 ಲಕ್ಷಗಳನ್ನು ಅವರ ನೌಕರರೊಬ್ಬರು ಬಸ್ಸಿನಲ್ಲಿ ಬೆಂಗಳೂರಿನಿಂದ ಕಲ್ಲಿಕೋಟೆಗೆ ತೆಗೆದುಕೊಂಡು ಹೋಗುತ್ತಿದ್ದಾಗ, ಬಸ್ಸನ್ನು ನಿಲ್ಲಿಸಿ ಸದರಿ ನೌಕರರನ್ನು ಎಳೆದುಕೊಂಡು ಹೋಗಿ, ಹಣವನ್ನು ಕಸಿದುಕೊಂಡು, ಸದರಿ ಕಸಿದುಕೊಂಡ ಹಣವನ್ನು ಇತರ ಸಹೋದ್ಯೋಗಿಗಳೊಂದಿಗೆ ಹಂಚಿಕೊಂಡರು ಎಂಬ ಆಪಾದನೆಗೆ ಒಳಗಾಗಿದ್ದರು. ಶ್ರೀ ಬಿ.ಎಸ್. ಬೆಳ್ಳಿಯಪ್ಪ ರವರು ಇತರ ಸಹೋದ್ಯೋಗಿಗಳೊಂದಿಗೆ ಷಾಮೀಲಾಗಿ ಹಣ ಕಸಿಯುವ ಯೋಜನೆಯನ್ನು ರೂಪಿಸಿದ್ದ ಆರೋಪದ ಹಿನ್ನೆಲೆಯಲ್ಲಿ ಇವರ ವಿರುದ್ಧ ಕ್ರಿಮಿನಲ್ ಮೊಕದ್ದಮೆಯನ್ನು ಐಪಿಸಿ ಸೆಕ್ಷನ್ 365, 384, 419 ಮತ್ತು 120 (ಬಿ) ರೆ/ವಿ 34 ರನ್ವಯ ದಿನಾಂಕ 03–09–2002 ರಂದು ದಾಖಲಿಸಲಾಗಿತ್ತು. ಶ್ರೀ ಬಿ.ಎಸ್. ಬೆಳ್ಳಿಯಪ್ಪನವರು ಪ್ರಕರಣ ದಾಖಲಾದ ದಿನದಿಂದಲೇ ನಾಪತ್ತೆಯಾಗಿದ್ದು, ಇವರನ್ನು ಪತ್ತೆ ಹಚ್ಚಲು ತೆಗೆದುಕೊಂಡ ಎಲ್ಲಾ ಕ್ರಮಗಳು ವ್ಯರ್ಥವಾದವು. ಚೀಫ್ ಮೆಟ್ರೊಪಾಲಿಟನ್ ಮ್ಯಾಜಿಸ್ಟ್ರೇಟ್, ಬೆಂಗಳೂರು ನಗರ, ಇವರು ಸಿ.ಆರ್.ಪಿ.ಸಿ. ಸೆಕ್ಷನ್ 82 ಮತ್ತು 83 ರನ್ವಯ ಅರ್ಜಿದಾರರನ್ನು ನಾಪತ್ತೆ ಆಸಾಮಿ ಎಂದು ಘೋಷಿಸಿ, ಶ್ರೀ ಬಿ.ಎಸ್. ಬೆಳ್ಳಿಯಪ್ಪನವರ ಆಸ್ತಿಯನ್ನು ಮುಟ್ಟುಗೋಲು ಹಾಕಿಕೊಳ್ಳಲು ಆದೇಶಿಸಿದ್ದರು. ತದನಂತರ ಡಿಜಿ ಮತ್ತು ಐಜಿಪಿ ರವರು ತಮ್ಮ ಪತ್ರ ದಿನಾಂಕ 15–10–2002 ರಲ್ಲಿ ಅರ್ಜಿದಾರರನ್ನು ನ್ಯಾಯಾಲಯ ನಾಪತ್ತೆ ಆಸಾಮಿ ಎಂದು ಘೋಷಿಸಿದ್ದರಿಂದ, ಶ್ರೀ ಬಿ.ಎಸ್. ಬೆಳ್ಳಿಯಪ್ಪನವರನ್ನು ವಿಚಾರಣೆ ನಡೆಸದೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು, 1965ರ ನಿಯಮ 9(11) ರೆ/ವಿ ಭಾರತ ಸಂವಿಧಾನದ ಅನುಚ್ಛೇದ 311 (2)(ಬಿ) ರನ್ವಯ ಸೇವೆಯಿಂದ ವಜಾಗೊಳಿಸಲು ಶಿಫಾರಸ್ಸು ಮಾಡಿದ್ದರು. ಈ ಹಿನ್ನೆಲೆಯಲ್ಲಿ ರಾಜ್ಯ ಸರ್ಕಾರ ಶ್ರೀ ಬಿ.ಎಸ್. ಬೆಳ್ಳಿಯಪ್ಪನವರು ನಾಪತ್ತೆಯಾಗಿದ್ದು, ನ್ಯಾಯಾಲಯ ಇವರ ಇರವು ಎಲ್ಲಿಯೂ ಗೊತ್ತಾಗದೆ ನಾಪತ್ತೆ ಆಸಾಮಿ ಎಂದು ಘೋಷಿಸಿದ್ದರಿಂದ ಮತ್ತು ಇವರನ್ನು ಪತ್ತೆ ಹಚ್ಚಲು ತೆಗೆದುಕೊಂಡ ಎಲ್ಲಾ ಕ್ರಮಗಳು ನಿರರ್ಥಕವಾದುದರಿಂದ, ಇವರ ವಿರುದ್ಧ ವಿಚಾರಣೆ ನಡೆಸುವುದು impractical ಎಂದು ನಿರ್ಧರಿಸಿ, ಉಲ್ಲೇಖ (1) ರಲ್ಲಿರುವ ಆದೇಶದಲ್ಲಿ ಶ್ರೀ ಬಿ.ಎಸ್. ಬೆಳ್ಳಿಯಪ್ಪನವರನ್ನು ಸೇವೆಯಿಂದ ವಜಾಗೊಳಿಸಿ ಆದೇಶ ಹೊರಡಿಸಿತ್ತು.

ಶ್ರೀ ಬಿ.ಎಸ್. ಬೆಳ್ಳಿಯಪ್ಪನವರು ಕೆ.ಎ.ಟಿ. ಯಲ್ಲಿ ಅರ್ಜಿ ಸಂಖ್ಯೆ : 349 ಮತ್ತು 350/2003 ಅನ್ನು ದಾಖಲಿಸಿ, ದಿನಾಂಕ 20–10–2002 ಆದೇಶವನ್ನು ಮತ್ತು ಇವರನ್ನು ಸೇವೆಯಿಂದ ವಜಾಗೊಳಿಸಿದ ಆದೇಶ ದಿನಾಂಕ 28–11–2002 ರ ಆದೇಶಗಳನ್ನು ರದ್ದುಪಡಿಸಬೇಕೆಂದು ಕೋರಿದ್ದರು. ಕೆ.ಎ.ಟಿ. ಸದರಿ ಅರ್ಜಿಯನ್ನು ಪರಿಗಣಿಸಿ ತನ್ನ ದಿನಾಂಕ 23–05–2007ರ ತೀರ್ಪಿನಲ್ಲಿ ದಿನಾಂಕ 20–10–2002ರ ನಾಪತ್ತೆ ನೋಟೀಸನ್ನು ಮತ್ತು ಇವರನ್ನು ಸೇವೆಯಿಂದ ವಜಾಗೊಳಿಸಿದ ದಿನಾಂಕ 28–11–2002ರ ಆದೇಶವನ್ನು ರದ್ದುಗೊಳಿಸಿತು. ನ್ಯಾಯಾಲಯವು ಈ ಅರ್ಜಿಯನ್ನು ತಾಂತ್ರಿಕ ಕಾರಣದ ಹಿನ್ನೆಲೆಯಲ್ಲಿ ಪರಿಗಣಿಸಿದ್ದು, merit ಆಧಾರದ ಮೇಲೆ ಪರಿಗಣಿಸಿರುವುದಿಲ್ಲ. ಕೆ.ಎ.ಟಿ.ಯು ಡಿ.ಜಿ ಮತ್ತು ಐಜಿಪಿ ರವರು ನೀಡಿದ ಮಾಹಿತಿಯ ಆಧಾರದ ಮೇಲೆ ಸರ್ಕಾರವು ಏಕಪಕ್ಷೀಯವಾಗಿ ಶ್ರೀ ಬೆಳ್ಳಿಯಪ್ಪನವರನ್ನು ವಜಾಗೊಳಿಸಿರುತ್ತದೆಯೇ ವಿನಃ ಸ್ವಾಭಾವಿಕ ನ್ಯಾಯದ ಆಧಾರದ ಮೇಲೆ ವಜಾಗೊಳಿಸಿರುವುದಿಲ್ಲ ಎಂದು ಅಭಿಪ್ರಾಯಪಟ್ಟಿರುತ್ತದೆ. ಆದರೂ, ಸರ್ಕಾರ ಹೊಸದಾಗಿ ಕಾನೂನಿನ್ವಯ ವಿಚಾರಣೆ ನಡೆಸಿ ಹೊಸದಾಗಿ ಆದೇಶಗಳನ್ನು ಹೊರಡಿಸಲು ಕೆ.ಎ.ಟಿ. ಅಡ್ಡಿ ಮಾಡುವುದಿಲ್ಲವೆಂದು ಉಲ್ಲೇಖ(2) ರಲ್ಲಿರುವ ಆದೇಶದಲ್ಲಿ ತಿಳಿಸಿರುತ್ತದೆ.

ಸರ್ಕಾರವು ಉಲ್ಲೇಖ (4) ರಲ್ಲಿರುವ ಆದೇಶದಲ್ಲಿ ಶ್ರೀ ಬೆಳ್ಳಿಯಪ್ಪ ಇವರ ವಿರುದ್ಧ ಶಿಸ್ತು ಕ್ರಮವನ್ನು ಜರುಗಿಸಿ, ಇಲಾಖಾ ವಿಚಾರಣೆಗೆ ಆದೇಶಿಸಲಾಯಿತು. ಶಿಸ್ತು ನಡವಳಿಯ ಎಲ್ಲಾ ಕಾನೂನು ಮತ್ತು ಅವಕಾಶಗಳ ಅನ್ವಯ ಮತ್ತು ಸ್ವಾಭಾವಿಕ ನ್ಯಾಯದಂತೆ ಶ್ರೀ ಬಿ.ಎಸ್. ಬೆಳ್ಳಿಯಪ್ಪನವರು ತಮ್ಮನ್ನು ಸಮರ್ಥಿಸಿಕೊಳ್ಳಲು ಸಾಕಷ್ಟು ಅವಕಾಶಗಳನ್ನು ನೀಡಿ ವಿಚಾರಣೆಯನ್ನು ನಡೆಸಿ, ಇಲಾಖಾ ವಿಚಾರಣಾಧಿಕಾರಿಗಳು ತಮ್ಮ ವಿಚಾರಣಾ ವರದಿಯನ್ನು ಸಲ್ಲಿಸಿರುತ್ತಾರೆ. ವಿಚಾರಣಾ ವರದಿಯಲ್ಲಿ ವಿಚಾರಣಾಧಿಕಾರಿಗಳು ಶ್ರೀ ಬಿ.ಎಸ್. ಬೆಳ್ಳಿಯಪ್ಪನವರು ಚಿನ್ನದ ವ್ಯಾಪಾರಿಗೆ ಸೇರಿದ ರೂ. 19.00 ಲಕ್ಷಗಳನ್ನು ನೌಕರನಿಂದ ಅಪಹರಿಸಿ, ಇವರ ಅಧೀನ ಸಿಬ್ಬಂದಿ ಒಬ್ಬರನ್ನು ದಸ್ತಗಿರಿ ಮಾಡಿದ ಸುದ್ದಿ ತಿಳಿದು, ಆ ದಿನದಿಂದಲೇ ಕರ್ತವ್ಯಕ್ಕೆ ಗೈರು ಹಾಜರಾಗಿ ತಾನು ಅನಾರೋಗ್ಯಕ್ಕೆ ಒಳಗಾಗಿರುವವನೆಂದು ಹೇಳಿ ಮೇಲಧಿಕಾರಿಗಳಿಗೆ ವಿಷಯ ತಿಳಿಸದೇ ತನ್ನ ರಜೆ ಅರ್ಜಿಯನ್ನು ಅವರ ಚಾಲಕರ ಕೈಯಲ್ಲಿ ತನ್ನ ಕಛೇರಿಯ ಬರಹಗಾರರೊಬ್ಬರಿಗೆ ಕೊಡುವಂತೆ ಕಳುಹಿಸಿಕೊಟ್ಟಿದ್ದು, ನಂತರ ಕರ್ತವ್ಯಕ್ಕೆ ಹಾಜರಾಗದೆ, ತನಿಖಾಧಿಕಾರಿಗಳು ತಮ್ಮನ್ನು ಬಂಧಿಸಬಹುದೆಂಬ ಭೀತಿಯಿಂದ ತಲೆಮರೆಸಿಕೊಂಡು ನಾಪತ್ತೆ ಆಸಾಮಿ ಎಂದು ಪರಿಗಣಿಸಿ ಸೇವೆಯಿಂದ ವಜಾಗೊಳಿಸುವವರೆಗೆ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರು ಹಾಜರಾಗಿದ್ದು, ಇವರು

ತಮ್ಮ ಕರ್ತವ್ಯದಲ್ಲಿ ನಿರ್ಲಕ್ಷ್ಯತೆ ಹಾಗೂ ಬೇಜವಾಬ್ದಾರಿತನದಿಂದ ನಡೆದುಕೊಂಡು ದೀರ್ಘಕಾಲ ಕರ್ತವ್ಯಕ್ಕೆ ಗೈರುಹಾಜರಾಗಿ ಕರ್ತವ್ಯ ಲೋಪವೆಸಗಿರುವುದು ಇಲಾಖಾ ವಿಚಾರಣೆಯಿಂದ ದೃಢಪಟ್ಟಿರುವುದಾಗಿ ವಿಚಾರಣಾಧಿಕಾರಿಗಳು ವರದಿ ಮಾಡಿರುತ್ತಾರೆ.

ವಿಚಾರಣಾಧಿಕಾರಿಗಳ ವರದಿಯನ್ನು ಆಧರಿಸಿ ಶ್ರೀ ಬೆಳ್ಳಿಯಪ್ಪ ಇವರಿಗೆ ಉಲ್ಲೇಖ(6) ರಲ್ಲಿ ಕಾರಣ ಕೇಳುವ ನೋಟೀಸನ್ನು ಜಾರಿ ಮಾಡಲಾಗಿತ್ತು. ಆದರೆ ಸದರಿ ನೋಟೀಸಿಗೆ ಶ್ರೀ ಬೆಳ್ಳಿಯಪ್ಪ ಇವರಿಂದ ಸಮಜಾಯಿಷಿ ಸ್ವೀಕೃತವಾಗಿರುವುದಿಲ್ಲ.

ಶ್ರೀ ಬಿ.ಎಸ್. ಬೆಳ್ಳಿಯಪ್ಪನವರು ನಾಪತ್ತೆಯಾಗಿದ್ದನ್ನು ಪರಿಗಣಿಸಿ ನ್ಯಾಯಾಲಯವು ಇವರನ್ನು ಅಪರಾಧಿ "proclaimed offender" ಎಂದು ಘೋಷಿಸಿದ್ದರಿಂದ, ಇವರ ಇರುವಿಕೆಯ ಬಗ್ಗೆ ಮಾಡಿದ ಎಲ್ಲಾ ಪ್ರಯತ್ನಗಳು ವಿಫಲವಾದ್ದರಿಂದ ಸರ್ಕಾರದ ಆದೇಶ ಸಂಖ್ಯೆ : ಒಸಾಇ 287 ಪೊಸಿಪ 2002 ದಿನಾಂಕ 28–11–2002ರ ಆದೇಶದಲ್ಲಿ ಶ್ರೀ ಬಿ.ಎಸ್. ಬೆಳ್ಳಿಯಪ್ಪ ಅವರನ್ನು ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮ, 1965ರ ನಿಯಮ 9(ii) ಅನ್ನು ಭಾರತ ಸಂವಿಧಾನದ ಆರ್ಟಿಕಲ್–311(2) (ಬಿ) ರೊಂದಿಗೆ ಓದಿಕೊಂಡಂತೆ, ಸದರಿ ಆದೇಶವನ್ನು ಹೊರಡಿಸಿದ ದಿನಾಂಕದಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ವಜಾಗೊಳಿಸಲಾಗಿದೆ. ಈ ಆದೇಶವನ್ನು ಕೆ.ಎ.ಟಿ. ರದ್ದುಗೊಳಿಸಿ, ಹೊಸದಾಗಿ ಇಲಾಖಾ ವಿಚಾರಣೆ ನಡೆಸುವಂತೆ ಆದೇಶಿಸಿದ್ದರಿಂದ, ಇಲಾಖಾ ವಿಚಾರಣೆ ನಡೆಸಿದ್ದು, ಸದರಿ ಇಲಾಖಾ ವಿಚಾರಣೆಯಲ್ಲಿ ಶ್ರೀ ಬಿ.ಎಸ್. ಬೆಳ್ಳಿಯಪ್ಪ ನವರ ವಿರುದ್ಧ ಮಾಡಲಾದ ಆಪಾದನೆಗಳು ದಾಖಲೆಗಳ ಆಧಾರದ ಮೇಲೆ ದೃಢಪಟ್ಟಿರುತ್ತವೆ. ಆದುದರಿಂದ, ಆಪಾದನೆಗಳ ಸಾಂದ್ರತೆಗೆ (gravity) ತಕ್ಕಂತೆ ಇವರಿಗೆ ದಂಡನೆಯನ್ನು ವಿಧಿಸಬೇಕಾಗುತ್ತದೆ. ಈ ಅಂಶಗಳ ಹಿನ್ನೆಲೆಯಲ್ಲಿ ಮತ್ತು ಕ್ರಿಮಿನಲ್ ನ್ಯಾಯಾಲಯ ಇವರನ್ನು (acquit) ಮಾಡಿರುವ ಹಿನ್ನೆಲೆಯಲ್ಲಿ ಶ್ರೀ ಬಿ.ಎಸ್. ಬೆಳ್ಳಿಯಪ್ಪನವರನ್ನು ಸೇವೆಯಿಂದ ಕಡ್ಡಾಯ ನಿವೃತ್ತಿಗೊಳಿಸುವ ದಂಡನೆಯನ್ನು ವಿಧಿಸಲು ತೀರ್ಮಾನಿಸಿ ಉಲ್ಲೇಖ (7)ರ ಪತ್ರದಲ್ಲಿ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಕೋರಲಾಗಿತ್ತು. ಉಲ್ಲೇಖ (8) ರಲ್ಲಿರುವ ಪತ್ರದಲ್ಲಿ ಕರ್ನಾಟಕ ಲೋಕಸೇವಾ ಆಯೋಗವು ತಮ್ಮ ಸಹಮತಿಯನ್ನು ತಿಳಿಸಿರುತ್ತದೆ. ಪ್ರಸ್ತಾವನೆಯನ್ನು ಪರಿಶೀಲಿಸಲಾಯಿತು. ಅದರಂತೆ ಈ ಕೆಳಕಂಡಂತೆ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಒಇ 335 ಪೊಸಇ 2011, ಬೆಂಗಳೂರು, ದಿನಾಂಕ : 11–02–2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಸಂಖ್ಯೆ : ಒಸಾಇ 287 ಪೊಸಿಪ 2002 ದಿನಾಂಕ 28–11–2002 ರ ಆದೇಶದಲ್ಲಿ ಶ್ರೀ ಬಿ.ಎಸ್. ಬೆಳ್ಳಿಯಪ್ಪ, ಅಂದಿನ ಪೊಲೀಸ್ ಸಹಾಯಕ ಆಯುಕ್ತರು, ಪಶ್ಚಿಮ ಸಂಚಾರಿ ವಿಭಾಗ, ಬೆಂಗಳೂರು ನಗರ ಇವರನ್ನು ಸರ್ಕಾರಿ ಸೇವೆಯಿಂದ ವಜಾಗೊಳಿಸಿರುವ ಆದೇಶವನ್ನು ಮಾರ್ಪಡಿಸಿ ದಿನಾಂಕ 28–11–2002 ರಿಂದ ಜಾರಿಗೆ ಬರುವಂತೆ ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಕಲಂ 23(1)(ಬಿ)(ii) ರಡಿಯಲ್ಲಿ ಕಡ್ಡಾಯ ನಿವೃತ್ತಿಗೊಳಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಟಿ.ಎನ್. ರವಿಪ್ರಕಾಶ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು–ಎ)

**P.R. 455**

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಬಸವನಾಯಕ, ಎ.ಎಸ್.ಐ. ಗ್ರಾಮಾಂತರ ಪೊಲೀಸ್ ಠಾಣೆ, ಹುಣಸೂರು, ಮತ್ತು ಶ್ರೀ ಎಂ. ವೆಂಕಟರಾಮಪ್ಪ, ಪಿ.ಎಸ್.ಐ. ಶ್ರೀರಂಗಪಟ್ಟಣ ಪೊಲೀಸ್ ಠಾಣೆ, ಇವರುಗಳ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:**

1. ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು, ಇವರ ಆದೇಶ ಸಂಖ್ಯೆ: ಇವಿ/73/2009–10 (ಓ.ಬಿ. ಸಂಖ್ಯೆ : 23/2010–11) ದಿನಾಂಕ 11–02–2011.
2. ಮೇಲ್ಮನವಿ ಪ್ರಾಧಿಕಾರ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಆದೇಶ ಸಂಖ್ಯೆ : ಅಪೀಲು (4) 03/2011–12, (ಓ.ಬಿ. ಸಂಖ್ಯೆ ; 57/2011–12) ದಿನಾಂಕ 25–02–2012.
3. ಅರ್ಜಿದಾರರುಗಳ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ 21–5–2012 ಮತ್ತು 12.6.2012.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು (2)17/2012–13, ದಿನಾಂಕ 27–8–2012.

**ಪ್ರಸ್ತಾವನೆ:**

ಶ್ರೀ ಬಸವನಾಯಕ, ಎ.ಎಸ್.ಐ., ಹೆಚ್.ಡಿ. ಕೋಟೆ ಪೊಲೀಸ್ ಠಾಣೆ, ಮತ್ತು ಶ್ರೀ ಎಂ. ವೆಂಕಟರಾಮಪ್ಪ, ಪಿ.ಎಸ್.ಐ., ಸರಗೂರು ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ಬೇಜವಾಬ್ದಾರಿತನ ಹಾಗೂ ನಿರ್ಲಕ್ಷ್ಯತೆ ಪ್ರದರ್ಶಿಸಿದ ಕಾರಣದ ಮೇಲೆ ಈ ಇಬ್ಬರು ಅಧಿಕಾರಿಗಳ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು, 1965ರ ನಿಯಮ 6 ಮತ್ತು 8 ರಡಿ ಜಂಟಿ ಇಲಾಖಾ ವಿಚಾರಣೆಗೆ ಆದೇಶಿಸಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ :**

**ಆರೋಪ 1 :–**

"ಒಂದನೇ ಆರೋಪಿತ ಪೊಲೀಸ್ ಅಧಿಕಾರಿಯಾದ ಶ್ರೀ ಬಸವನಾಯಕ, ಎ.ಎಸ್.ಐ., ಹೆಚ್.ಡಿ. ಕೋಟೆ ಪೊಲೀಸ್ ಠಾಣೆ, ಆದ ನೀವು ಹೆಚ್.ಡಿ. ಕೋಟೆ ತಾಲ್ಲೂಕು, ಹೂವಿನ ಕೊಳ ಗ್ರಾಮದ ವಾಸಿ ಶ್ರೀ ಮಂಜುಸ್ವಾಮಿ, ಬಿನ್ ಜವರಯ್ಯ, ಇವರು ಯಾರೋ ಇವರ ಮೇಲೆ ಹಲ್ಲೆ ಮಾಡಿರುವ ಬಗ್ಗೆ ದಿನಾಂಕ: 09–04–2009 ರಂದು ಹೆಚ್.ಡಿ. ಕೋಟೆ ಆಸ್ಪತ್ರೆಗೆ ದಾಖಲಾಗಿದ್ದು, ಈ ಬಗ್ಗೆ ವೈದ್ಯಾಧಿಕಾರಿಗಳು ಹೆಚ್.ಡಿ. ಕೋಟೆ ಠಾಣೆಗೆ ಅಸಾಲ್ಟ್ ಮೆಮೋವನ್ನು ಕಳುಹಿಸಿದ್ದು, ಸದರಿ ಮೆಮೋವನ್ನು ನೀವು

ಸ್ವೀಕರಿಸಿಕೊಂಡು ಸಂಬಂಧಪಟ್ಟ ಸರಗೂರು ಪೊಲೀಸ್ ಠಾಣೆಗೆ ನಿಗದಿತ ಸಮಯದಲ್ಲಿ ಮಾಹಿತಿ ನೀಡದೆ ಕರ್ತವ್ಯದಲ್ಲಿ ಬೇಜವಾಬ್ದಾರಿತನ ಹಾಗೂ ನಿರ್ಲಕ್ಷತೆ ತೋರಿರುತ್ತೀರಿ."

**ಆರೋಪ 2 :–**

"ಎರಡನೇ ಆರೋಪಿತ ಪೊಲೀಸ್ ಅಧಿಕಾರಿಯಾದ ಶ್ರೀ ಎಂ. ವೆಂಕಟರಾಮಪ್ಪ, ಪಿ.ಎಸ್.ಐ., ಸರಗೂರು ಪೊಲೀಸ್ ಠಾಣೆಯಾದ ನೀವು ದಿನಾಂಕ 13–4–2009 ರಂದು ಸರಗೂರು ಪೊಲೀಸ್ ಠಾಣೆಯ ಸಿ.ಹೆಚ್.ಸಿ.–35 ರವರು ಮೈಸೂರು ಕೆ.ಆರ್. ಆಸ್ಪತ್ರೆಗೆ ಹೋಗಿ ಗಾಯಾಳು ಮಂಜುಸ್ವಾಮಿ ಎಂಬುವವರ ಹೇಳಿಕೆ ಪಡೆದುಕೊಂಡು ಮೊಕದ್ದಮೆ ಸಂಖ್ಯೆ : 82/09 ಕಲಂ 341, 323, 324 ಐಪಿಸಿ ರೀತ್ಯಾ ಕೇಸು ದಾಖಲಿಸಿದ್ದು, ಪಿ.ಎಸ್.ಐ. ಆದ ನೀವು ದಿನಾಂಕ 22–04–2009ರ ವರೆಗೆ ಈ ಪ್ರಕರಣದ ತನಿಖೆಯನ್ನು ಕೈಗೊಳ್ಳದೇ ದಿನಾಂಕ 23–4–2009 ರಂದು ಪಿರ್ಯಾದಿಯ ಮರು ಹೇಳಿಕೆಯನ್ನು ಪಡೆದಿದ್ದು, ಅನುಮಾನಾಸ್ಪದ ಆಸಾಮಿಗಳಾದ ಸಿದ್ದಯ್ಯ, ಮಹದೇವ ಮತ್ತು ಪರಶಿವಮೂರ್ತಿ ರವರನ್ನು ವಿಚಾರಣೆ ಮಾಡಿ ಕಲಂ 169 ಸಿಆರ್‌ಪಿಸಿ ರೀತ್ಯಾ ಬಿಡುಗಡೆಗೊಳಿಸಿದ್ದು ದಿನಾಂಕ 01–07–2009 ರಂದು ಗಾಯಾಳು ಮೃತಪಟ್ಟಿರುತ್ತಾರೆ. ಈ ಪ್ರಕರಣದಲ್ಲಿ ಅನುಮಾನಾಸ್ಪದ ವ್ಯಕ್ತಿಗಳು ಮತ್ತು ಮೃತನಿಗೂ ವೈಷಮ್ಯವಿದ್ದು, ಕಲಂ 302 ಕೂಡ 34 ಐಪಿಸಿ ರೀತ್ಯಾ ಪ್ರಕರಣ ದಾಖಲಿಸಿ ಸತ್ಯಾಸತ್ಯತೆಯನ್ನು ಪರಿಶೀಲಿಸಬಹುದಾಗಿದ್ದರೂ, ಆ ರೀತಿ ಮಾಡದೇ ಯುಡಿಆರ್ ಸಂ : 11/09 ಕಲಂ 174 (ಸಿ) ಸಿಆರ್‌ಪಿಸಿ ರೀತ್ಯಾ ದಾಖಲಿಸುವುದರ ಮೂಲಕ ನೀವು ನಿಮ್ಮ ಕರ್ತವ್ಯದಲ್ಲಿ ಬೇಜವಾಬ್ದಾರಿ ಹಾಗೂ ನಿರ್ಲಕ್ಷ್ಯತೆ ಪ್ರದರ್ಶಿಸಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಜಂಟಿ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರುಗಳಿಂದ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು, ಇವರು ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ದಿನಾಂಕ 11–02–11 ರ ಆದೇಶದಲ್ಲಿ ಅರ್ಜಿದಾರರುಗಳ ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ಅಡ್ಡಿಯಾಗದಂತೆ ಒಂದು ವರ್ಷದ ಕಾಲ ಮುಂದೂಡಿ, ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೆ ಪರಿಗಣಿಸಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರುಗಳ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ದಿನಾಂಕ 25–02–2012ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರುಗಳು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನು ಇಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಹೊಸ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಕರ್ತವ್ಯದಲ್ಲಿ ಬೇಜವಾಬ್ದಾರಿತನ ಹಾಗೂ ನಿರ್ಲಕ್ಷ್ಯತೆ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 70 ಪೊಸಿಅ 2012, ಬೆಂಗಳೂರು, ದಿನಾಂಕ : 31–01–2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಬಸವನಾಯಕ, ಎ.ಎಸ್.ಐ. ಗ್ರಾಮಾಂತರ ಪೊಲೀಸ್ ಠಾಣೆ, ಹುಣಸೂರು, ಮತ್ತು ಶ್ರೀ ಎಂ. ವೆಂಕಟರಾಮಪ್ಪ, ಪಿ.ಎಸ್.ಐ. ಶ್ರೀರಂಗಪಟ್ಟಣ ಪೊಲೀಸ್ ಠಾಣೆ, ಇವರುಗಳು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಎನ್. ರವಿಪ್ರಕಾಶ್,**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**P.R. 456**

## ENERGY SECRETARIAT

**Subject :** Release of Amount for implementation of Roof Top Solar Scheme in Karnataka.

**Read :** 1) Government Order No: EN 21 PSR 2012/ P2 Dated 30.01.2013.

2) F.D. note No: FD 365 Exp-1/13 dated 22.03.2013.

**PREAMBLE :**

1. In the budget estimate of 2012-13 Government has provided Rs.4.00 crores for Roof Top Solar Project for General Category under the head of account 4801-80-190-0-04-132 Plan.
2. In Govt order dated 30.01.2013 approval was accorded for implementation of 'Roof Top Solar Scheme 'for General Category by KREDL during 2012-13 with 50% beneficiary contribution, 30% MNRE contribution and 20% State Govt Support.

3. The issue is examined and as beneficiary selection has not been done so far, it is proposed to release Rs. 2.00 crores as State's Share towards implementation of Roof Top Solar project under General Category. Hence, this order.

**GOVERNMENT ORDER NO. EN 21 PSR 2012/ P-1, BANGALORE, DATED: 26.03.2013**

1. The Government is pleased to accord approval for release of Rs. 2.00 crores [Rs Two Crores only] towards implementation of Roof Top Solar Scheme under General Category for 2012-13.
2. The amount is released under the Head of Account 4801-80-190-0-04-132 Plan, Roof Top Solar Project.
3. The implementation of the scheme is subject to conditions laid-down in the G.O No. : EN 21 PSR 2012/ P2 Dated 30.01.2013.
4. The KREDL shall draw the amount duly obtaining the counter signature of Deputy Secretary, Energy Department on the Payees Receipts.
5. The KREDL has to furnish **Utilization Certificate** for the amount released in this order.
6. This order is issued in accordance with the concurrence given in Finance Department vide its U 0 Note No: FD 365 Exp-1/13 dated 22.03.2013.

By Order and in the name of the Governor of Karnataka,
**A.A. CHAPPARBAND,**
Under Secretary to Government,
Energy Department.

**P.R. 457**

**ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ**

**ವಿಷಯ:** ಕರ್ನಾಟಕ ಸಕಾಲ ಸೇವೆಗಳ ಅಧಿನಿಯಮ 2011 ನ್ನು ಅನುಷ್ಠಾನಗೊಳಿಸಲು "ಮಿಷನ್ ಮೋಡ್" ನಲ್ಲಿ ರಚಿಸಿರುವ ಸಕಾಲ ಮಂಡಳಿಯ ಕಾರ್ಯ ನಿರ್ವಹಣೆಯನ್ನು ಮುಂದುವರೆಸುವ ಕುರಿತು.

**ಓದಲಾಗಿದೆ:**

1. ಅಧಿಸೂಚನೆ ಸಂಖ್ಯೆ : ಸಂವ್ಯಶಾಇ 39 ಶಾಸನ 2011, ದಿನಾಂಕ 02–01–2012.
2. ಅಧಿಸೂಚನೆ ಸಂಖ್ಯೆ : ಸಿಆಸುಇ 04 ಇಕಾಅ 2012, ದಿನಾಂಕ 14–02–2012.
3. ಅಧಿಸೂಚನೆ ಸಂಖ್ಯೆ : ಸಿಆಸುಇ 28 ಇಕಾಅ 2012, ದಿನಾಂಕ 27–02–2012.
4. ಅಧಿಸೂಚನೆ ಸಂಖ್ಯೆ : ಸಿಆಸುಇ 04 ಇಕಾಅ 2012, ದಿನಾಂಕ 01–03–2012.
5. ಸರ್ಕಾರದ ಆದೇಶದ ಸಂಖ್ಯೆ : ಸಿಆಸುಇ 20 ಇಕಾಅ 2012, ದಿನಾಂಕ 06–03–2012.
6. ಸರ್ಕಾರದ ಆದೇಶದ ಸಂಖ್ಯೆ : ಸಿಆಸುಇ 131 ಇಕಾಅ 2012, ದಿನಾಂಕ 13–07–2012.
7. ಸರ್ಕಾರದ ಆದೇಶದ ಸಂಖ್ಯೆ : ಸಿಆಸುಇ 135 ನಾಸೇಖಾ 2012, ದಿನಾಂಕ 22–12–2012.
8. ಸರ್ಕಾರದ ಪತ್ರ ಸಂಖ್ಯೆ : ಸಿಆಸುಇ 78 ಇಕಾಅ 2012, ದಿನಾಂಕ 26–03–2012.
9. ಸರ್ಕಾರದ ಆದೇಶದ ಸಂಖ್ಯೆ : ಸಿಆಸುಇ 20 ನಾಸೇಖಾ 2012, ದಿನಾಂಕ 22–12–2012.
10. ಸರ್ಕಾರದ ಅಧಿಸೂಚನೆ ಸಂಖ್ಯೆ : ಸಿಆಸುಇ 28 ಇಕಾಅ 2012, ದಿನಾಂಕ 28–03–2012.
11. ಸರ್ಕಾರದ ಅಧಿಸೂಚನೆ ಸಂಖ್ಯೆ : ಸಿಆಸುಇ 119 ನಾಸೇಖಾ 2012, ದಿನಾಂಕ 29–11–2012.
12. ಸರ್ಕಾರದ ಟಿಪ್ಪಣಿ ಸಂಖ್ಯೆ : ಸಿಆಸುಇ 36 ನಾಸೇಖಾ 2013, ದಿನಾಂಕ 13–02–2013.
13. ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಆಇ 151 ವೆಚ್ಚ–12/2013, ದಿನಾಂಕ 14–03–2013.

**ಪ್ರಸ್ತಾವನೆ:**

11 ಇಲಾಖೆಗಳ ಮುಖಾಂತರ 151 ಕಾಲಮಿತಿ ಸೇವೆಯನ್ನು ನಾಗರೀಕರಿಗೆ ಒದಗಿಸಲು ಕರ್ನಾಟಕ ನಾಗರೀಕರಿಗೆ ಸೇವೆಗಳ ಖಾತರಿ ಅಧಿನಿಯಮ, 2011 ವನ್ನು ರಾಜ್ಯ ಶಾಸನ ಸಭೆಯ ಸರ್ವಾನುಮತದಿಂದ ಅಂಗೀಕರಿಸಿತು. ಸಾರ್ವಜನಿಕರಿಗೆ ಸರ್ಕಾರಿ ಅಧಿಕಾರಿಗಳ ಹೊಣೆಗಾರಿಕೆಯನ್ನು ಖಾತರಿಪಡಿಸುವ ಮೂಲಕ ಸುಧಾರಿತ ಸೇವೆಯನ್ನು ನೀಡುವುದು ಈ ಅಧಿನಿಯಮದ ಗುರಿಯಾಗಿದೆ. ಇದು ಆಡಳಿತದಲ್ಲಿ ಹೆಚ್ಚಿನ ಪಾರದರ್ಶಕತೆ ಹಾಗೂ ದಕ್ಷತೆಯನ್ನು ತರುವುದಲ್ಲದೇ ದೊಡ್ಡ ಪ್ರಮಾಣದಲ್ಲಿ ಸಾರ್ವಜನಿಕ ಕುಂದುಕೊರತೆ ಹಾಗೂ ಭ್ರಷ್ಠ ಪದ್ಧತಿಗಳನ್ನು ಕಡಿಮೆ ಮಾಡುತ್ತದೆ.

ಮೇಲೆ ಓದಲಾದ ಉಲ್ಲೇಖ (1)ರ ದಿನಾಂಕ 02–01–2012ರ ಅಧಿಸೂಚನೆಯಲ್ಲಿ ಕರ್ನಾಟಕ ನಾಗರೀಕರಿಗೆ ಸೇವೆಗಳ ಖಾತರಿ ಅಧಿನಿಯಮದ ಮಸೂದೆಯನ್ನು ಕರ್ನಾಟಕ ರಾಜ್ಯ ವಿಶೇಷ ಪತ್ರಿಕೆಯಲ್ಲಿ ಭಾಗ–4ಎ ಯಲ್ಲಿ ಪ್ರಕಟಿಸಲಾಗಿದೆ.

ಮೇಲೆ ಓದಲಾದ ಉಲ್ಲೇಖ (2)ರ ದಿನಾಂಕ 14–02–2012ರ ಅಧಿಸೂಚನೆಯಲ್ಲಿ ಕರ್ನಾಟಕ ನಾಗರೀಕರಿಗೆ ಸೇವೆಗಳ ಖಾತರಿ ಕರಡು ನಿಯಮಗಳ ಬಗ್ಗೆ ಸಾರ್ವಜನಿಕರಿಂದ ಆಕ್ಷೇಪಣೆ/ಸಲಹೆಗಳನ್ನು ಆಹ್ವಾನಿಸಿ 15 ದಿನಗಳ ಕಾಲಾವಕಾಶ ನೀಡಿ ಕರ್ನಾಟಕ ರಾಜ್ಯ ವಿಶೇಷ ಪತ್ರಿಕೆಯಲ್ಲಿ ಪ್ರಕಟಿಸಲಾಗಿದೆ.

ಮೇಲೆ ಓದಲಾದ ಉಲ್ಲೇಖ (4)ರ ಅಧಿಸೂಚನೆಯಲ್ಲಿ ಕರ್ನಾಟಕ ನಾಗರೀಕರಿಗೆ ಸೇವೆಗಳ ಖಾತರಿ ನಿಯಮಗಳು 2012 ನ್ನು ಕರ್ನಾಟಕ ರಾಜ್ಯ ವಿಶೇಷ ಪತ್ರಿಕೆಯ ಭಾಗ–4ಎ ನಲ್ಲಿ ದಿನಾಂಕ 01–03–2012 ರಂದು ಪ್ರಕಟಿಸಿ ಜಾರಿಗೊಳಿಸಲಾಗಿದೆ.

ಮೇಲೆ ಓದಲಾದ (5)ರ ಸರ್ಕಾರದ ಆದೇಶದಲ್ಲಿ ಕರ್ನಾಟಕ ನಾಗರೀಕ ಸೇವೆಗಳ ಖಾತರಿ ಅಧಿನಿಯಮ 2011 ನ್ನು ಅನುಷ್ಠಾನಗೊಳಿಸಲು ಮಿಷನ್ ಮೋಡ್‌ನಲ್ಲಿ ಈ ಕೆಳಕಂಡ ಅಧಿಕಾರಿ/ಸಿಬ್ಬಂದಿಯೊಂದಿಗೆ ಸಕಾಲ ಮಂಡಳಿಯನ್ನು ರಚಿಸಲಾಗಿದೆ.

| ಸಕಾಲ ಮಂಡಳಿ | |
|---|---|
| **ಹುದ್ದೆಗಳ ವಿವರ** | **ಹುದ್ದೆಗಳ ಸಂಖ್ಯೆ** |
| ಮಿಷನ್ ನಿರ್ದೇಶಕರು, (ಸರ್ಕಾರದ ಕಾರ್ಯದರ್ಶಿ, ಸಿಆಸುಇ (ಆಸು) | 01 ಹುದ್ದೆ |
| ಅಪರ ಮಿಷನ್ ನಿರ್ದೇಶಕರುಗಳು (ಜಂಟಿ ಕಾರ್ಯದರ್ಶಿ, ಅಪರ ಕಾರ್ಯದರ್ಶಿ) | 02 ಹುದ್ದೆಗಳು |
| ಆಡಳಿತಾಧಿಕಾರಿ | 01 ಹುದ್ದೆ |
| ಮಾಹಿತಿ ತಂತ್ರಜ್ಞಾನ ಸಮಾಲೋಚಕರು | 01 ಹುದ್ದೆ |
| ಸಮಾಲೋಚಕರು (ನಿರ್ವಹಣೆ ಮತ್ತು ಆಡಳಿತ) | 02 ಹುದ್ದೆಗಳು |
| ಡಾಟಾ ಎಂಟ್ರಿ ಆಪರೇಟರ್‌ಗಳು, ಸಕಾಲ ಮಂಡಳಿ | 04 ಹುದ್ದೆಗಳು |
| **ಒಟ್ಟು** | **11 ಹುದ್ದೆಗಳು** |

ಮೇಲೆ ಓದಲಾದ (6)ರ ಸರ್ಕಾರದ ಆದೇಶದಲ್ಲಿ ಕರ್ನಾಟಕ ನಾಗರೀಕರಿಗೆ ಸೇವೆಗಳ ಖಾತರಿ ಅಧಿನಿಯಮ 2011ರ ಪರಿಣಾಮಕಾರಿ ಅನುಷ್ಠಾನಕ್ಕಾಗಿ ಮಂಡಳಿಯ ದೈನಂದಿನ ಆಡಳಿತ, ಲೆಕ್ಕಪತ್ರ ನಿರ್ವಹಣೆ, ಅಧಿಕಾರಿ ಸಿಬ್ಬಂದಿಗೆ ಹಾಗೂ ಕರೆ ಕೇಂದ್ರದ ಸಿಬ್ಬಂದಿಗೆ ವೇತನ ಪಾವತಿಸುವುದು, ಲೇಖನ ಸಾಮಗ್ರಿ/ಪೀಠೋಪಕರಣ ಖರೀದಿ, ಇಂಪ್ರೆಸ್ಟ್ ಮೊತ್ತದ ನಿರ್ವಹಣೆ, ಖಜಾನೆಯೊಂದಿಗೆ ಲೆಕ್ಕಪತ್ರಗಳನ್ನು ತಾಳೆ ಮಾಡುವುದು ಮುಂತಾದ ಕಾರ್ಯಗಳಿಗಾಗಿ ಒಬ್ಬ ಲೆಕ್ಕ ಪತ್ರಾಧಿಕಾರಿಯ ಅವಶ್ಯಕತೆಯಿಂದ ಸಕಾಲ ಮಂಡಳಿಗೆ ಸೃಜಿಸಲಾಗಿರುವ ಸಮಾಲೋಚಕರು (ಆಡಳಿತ) ಹುದ್ದೆಯನ್ನು ಲೆಕ್ಕ ಪತ್ರಾಧಿಕಾರಿ ಹುದ್ದೆಯನ್ನಾಗಿ ಪರಿವರ್ತಿಸಿ, ಸಚಿವ ಸಂಪುಟದ ಅನುಮೋದನೆಯೊಂದಿಗೆ, ಲೆಕ್ಕ ಪತ್ರಾಧಿಕಾರಿಯನ್ನು ನೇಮಿಸಲಾಗಿದೆ.

ಮೇಲೆ ಓದಲಾದ (7)ರ ಸರ್ಕಾರದ ಆದೇಶದಲ್ಲಿ ಕರ್ನಾಟಕ ಸಕಾಲ ಸೇವೆಗಳ ಅಧಿನಿಯಮ 2011 ನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಬಿಬಿಎಂಪಿಗೆ ಒಬ್ಬರು ಮಾಹಿತಿ ತಂತ್ರಜ್ಞಾನ ಸಮಾಲೋಚಕರನ್ನು ನೇಮಿಸಿದೆ.

ಮೇಲೆ ಓದಲಾದ (8)ರ ಸರ್ಕಾರದ ಪತ್ರದಲ್ಲಿ ಕರ್ನಾಟಕ ನಾಗರೀಕರಿಗೆ ಸೇವೆಗಳ ಖಾತರಿ ಅಧಿನಿಯಮ, 2011ರ ಪರಿಣಾಮಕಾರಿ ಅನುಷ್ಠಾನಕ್ಕಾಗಿ ಜಿಲ್ಲಾ ಮಟ್ಟದಲ್ಲಿ ಜಿಲ್ಲಾಧಿಕಾರಿಗಳಿಗೆ ಸಹಕರಿಸಲು ಒಬ್ಬ ಐ.ಟಿ. ಸಮಾಲೋಚಕರನ್ನು ನೇಮಕ ಮಾಡಿಕೊಳ್ಳಲು ದಿನಾಂಕ 22–3–2012 ಮತ್ತು 24–3–2012 ರಂದು ಮಾನ್ಯ ಕಾರ್ಯದರ್ಶಿಯವರೊಂದಿಗೆ ನಡೆಸಿದ ವಿಡಿಯೋ ಸಂವಾದದಲ್ಲಿ ಕಿಯೋನಿಕ್ಸ್ ಸಂಸ್ಥೆ, ಬೆಂಗಳೂರು ಇವರ ಮೂಲಕ ಗುತ್ತಿಗೆ ಆಧಾರದ ಮೇಲೆ ನೇಮಿಸಿಕೊಳ್ಳುವಂತೆ ಸೂಚಿಸಲಾಗಿದೆ.

ಮೇಲೆ ಓದಲಾದ (9)ರ ಸರ್ಕಾರದ ಆದೇಶದಲ್ಲಿ ಕರ್ನಾಟಕ ಸಕಾಲ ಸೇವೆಗಳ ಅಧಿನಿಯಮ 2011ರ ಅನುಷ್ಠಾನಕ್ಕಾಗಿ ರಚಿಸಲಾಗಿರುವ ಸಕಾಲ ಮಂಡಳಿಗೆ ಇಬ್ಬರು 'ಡಿ' ದರ್ಜೆ ನೌಕರರನ್ನು ಹೊರಗುತ್ತಿಗೆ ಆಧಾರದ ಮೇಲೆ ನೇಮಿಸಿಕೊಳ್ಳಲಾಗಿದೆ.

ಮೇಲೆ ಓದಲಾದ (10)ರ ಅಧಿಸೂಚನೆಯಲ್ಲಿ ರಾಜ್ಯ ಸರ್ಕಾರವು 11 ಇಲಾಖೆಗಳ ಮುಖಾಂತರ 151 ಕಾಲಮಿತಿ ಸೇವೆಗಳನ್ನು ಕರ್ನಾಟಕ ನಾಗರೀಕರಿಗೆ ಒದಗಿಸಲು ಕರ್ನಾಟಕ ನಾಗರೀಕರಿಗೆ ಸೇವೆಗಳ ಖಾತರಿ ಅಧಿನಿಯಮ 2011 ನ್ನು ದಿನಾಂಕ 02–04–2012 ರಿಂದ ರಾಜ್ಯಾದ್ಯಂತ ಅನುಷ್ಠಾನಗೊಳಿಸಲಾಗಿದೆ.

ಮೇಲೆ ಓದಲಾದ (11)ರ ಅಧಿಸೂಚನೆಯಲ್ಲಿ "ಕರ್ನಾಟಕ ಸಕಾಲ ಸೇವೆಗಳ ಅಧಿನಿಯಮ, 2011"ರ ಸಂಬಂಧ ಸರ್ಕಾರದ ಕ್ರಮಾಂಕ ಸಿಆಸುಇ 119 ನಾಸೇಖಾ 2012, ದಿನಾಂಕ 26–10–2012 ರ ಅಧಿಸೂಚನೆ–1 ರ ತಿದ್ದುಪಡಿ ಅಧಿಸೂಚನೆಯಲ್ಲಿ ಸೇರಿಸಿರುವ ಹೆಚ್ಚುವರಿ ಸೇವೆಗಳಲ್ಲಿ 12 ಇಲಾಖೆಗಳ 93 ಹೆಚ್ಚುವರಿ ಸೇವೆಗಳನ್ನು ಹಾಗೂ ಸಿಬ್ಬಂದಿ ಕಲ್ಯಾಣಕ್ಕೆ ಸಂಬಂಧಿಸಿದಂತೆ ಕರ್ನಾಟಕ ಸರ್ಕಾರದ ಸಚಿವಾಲಯದಲ್ಲಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ 21 ಸೇವೆಗಳನ್ನು ದಿನಾಂಕ 3ನೇ ಡಿಸೆಂಬರ್ 2012 ರಿಂದ ರಾಜ್ಯದಾದ್ಯಂತ ಜಾರಿಗೆ ಬರುವಂತೆ ಅಧಿಸೂಚನೆಯನ್ನು ಹೊರಡಿಸಲಾಗಿದೆ.

ಮೇಲೆ ಓದಲಾದ (12)ರ ಸಕಾಲ ಸೇವೆಗಳ ಅಧಿನಿಯಮ 2011 ರಡಿಯಲ್ಲಿ ನೀಡಲಾಗುತ್ತಿರುವ ಸೇವೆಗಳ ಪರಿಣಾಮಕಾರಿ ಅನುಷ್ಠಾನಕ್ಕಾಗಿ ಸಕಾಲ ಮಂಡಳಿಗೆ ಮಂಜೂರಾಗಿರುವ ಈ ಕೆಳಕಂಡ 44 ವಿವಿಧ ಹುದ್ದೆಗಳೊಂದಿಗೆ ಸಕಾಲ ಮಂಡಳಿಯ ಕಾರ್ಯನಿರ್ವಹಣೆಯನ್ನು ಮುಂದುವರೆಸಲು ದಿನಾಂಕ 07–03–2013 ರಿಂದ ಒಂದು ವರ್ಷದ ಅವಧಿಗೆ ಮುಂದುವರೆಸಲು ಆರ್ಥಿಕ ಇಲಾಖೆಯ ಅನುಮೋದನೆಯನ್ನು ಕೋರಲಾಗಿದೆ.

| ಸಕಾಲ ಮಂಡಳಿ | | |
|---|---|---|
| **ಕ್ರ. ಸಂ.** | **ಹುದ್ದೆಗಳ ವಿವರ** | **ಹುದ್ದೆಗಳ ಸಂಖ್ಯೆ** |
| 1 | ನಿರ್ದೇಶಕರು, ಸಕಾಲ ಮಂಡಳಿ | 01 ಹುದ್ದೆ |
| 2 | ಅಪರ ಮಿಷನ್ ನಿರ್ದೇಶಕರುಗಳು, ಸಕಾಲ ಮಂಡಳಿ | 02 ಹುದ್ದೆ |
| 3 | ಆಡಳಿತಾಧಿಕಾರಿ, ಸಕಾಲ ಮಂಡಳಿ | 01 ಹುದ್ದೆ |
| 4 | ಮಾಹಿತಿ ತಂತ್ರಜ್ಞಾನ ಸಮಾಲೋಚಕರು, ಸಕಾಲ ಮಂಡಳಿ | 01 ಹುದ್ದೆ |
| 5 | ಸಮಾಲೋಚಕರು (ನಿರ್ವಹಣೆ), ಸಕಾಲ ಮಂಡಳಿ | 01 ಹುದ್ದೆ |
| 6 | ಲೆಕ್ಕ ಪತ್ರಾಧಿಕಾರಿ, ಸಕಾಲ ಮಂಡಳಿ | 01 ಹುದ್ದೆ |
| 7 | ಡಾಟಾ ಎಂಟ್ರಿ ಆಪರೇಟರ್‌ಗಳು, ಸಕಾಲ ಮಂಡಳಿ | 04 ಹುದ್ದೆ |

| ಸಕಾಲ ಮಂಡಳಿ | | |
|---|---|---|
| ಕ್ರ. ಸಂ. | ಹುದ್ದೆಗಳ ವಿವರ | ಹುದ್ದೆಗಳ ಸಂಖ್ಯೆ |
| 8 | ಜಿಲ್ಲಾ ಮಾಹಿತಿ ತಂತ್ರಜ್ಞಾನ ಸಮಾಲೋಚಕರು, ಸಕಾಲ ಮಂಡಳಿ + ಬಿ.ಬಿ.ಎಂ.ಪಿ. | 30 ಹುದ್ದೆಗಳು+1 |
| 9 | ಗ್ರೂಪ್ –ಡಿ ಸಕಾಲ ಮಂಡಳಿ | 02 ಹುದ್ದೆ |
| | ಒಟ್ಟು | **44 ಹುದ್ದೆಗಳು** |

ಮೇಲೆ ಓದಲಾದ (13)ರಲ್ಲಿ ಆರ್ಥಿಕ ಇಲಾಖೆಯು ಸಹಮತಿಸಿದೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 36 ನಾಸೇಖಾ 2013, ಬೆಂಗಳೂರು, ದಿನಾಂಕ : 25–03–2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ "ಕರ್ನಾಟಕ ಸಕಾಲ ಸೇವೆಗಳ ಅಧಿನಿಯಮ 2011"ರ ಪರಿಣಾಮಕಾರಿ ಅನುಷ್ಠಾನಕ್ಕೆ ಸಕಾಲ ಮಂಡಳಿ ಹಾಗೂ ಅದಕ್ಕೆ ಮಂಜೂರಾಗಿರುವ ಕೆಳಕಂಡ ಹುದ್ದೆಗಳನ್ನು ದಿನಾಂಕ 06–03–2013 ರಿಂದ ಒಂದು ವರ್ಷದ ಅವಧಿಗೆ ಮುಂದುವರೆಸಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

| ಸಕಾಲ ಮಂಡಳಿ | | |
|---|---|---|
| ಕ್ರ. ಸಂ. | ಹುದ್ದೆಗಳ ವಿವರ | ಹುದ್ದೆಗಳ ಸಂಖ್ಯೆ |
| 1 | ನಿರ್ದೇಶಕರು, ಸಕಾಲ ಮಂಡಳಿ | 01 ಹುದ್ದೆ |
| 2 | ಅಪರ ಮಿಷನ್ ನಿರ್ದೇಶಕರುಗಳು, ಸಕಾಲ ಮಂಡಳಿ | 02 ಹುದ್ದೆ |
| 3 | ಆಡಳಿತಾಧಿಕಾರಿ, ಸಕಾಲ ಮಂಡಳಿ | 01 ಹುದ್ದೆ |
| 4 | ಮಾಹಿತಿ ತಂತ್ರಜ್ಞಾನ ಸಮಾಲೋಚಕರು, ಸಕಾಲ ಮಂಡಳಿ | 01 ಹುದ್ದೆ |
| 5 | ಸಮಾಲೋಚಕರು (ನಿರ್ವಹಣೆ), ಸಕಾಲ ಮಂಡಳಿ | 01 ಹುದ್ದೆ |
| 6 | ಲೆಕ್ಕ ಪತ್ರಾಧಿಕಾರಿ, ಸಕಾಲ ಮಂಡಳಿ | 01 ಹುದ್ದೆ |
| 7 | ಡಾಟಾ ಎಂಟ್ರಿ ಆಪರೇಟರ್‌ಗಳು, ಸಕಾಲ ಮಂಡಳಿ | 04 ಹುದ್ದೆ |
| 8 | ಜಿಲ್ಲಾ ಮಾಹಿತಿ ತಂತ್ರಜ್ಞಾನ ಸಮಾಲೋಚಕರು, ಸಕಾಲ ಮಂಡಳಿ + ಬಿ.ಬಿ.ಎಂ.ಪಿ. | 30 ಹುದ್ದೆಗಳು+1 |
| 9 | ಗ್ರೂಪ್ –ಡಿ ಸಕಾಲ ಮಂಡಳಿ | 02 ಹುದ್ದೆ |
| | ಒಟ್ಟು | **44 ಹುದ್ದೆಗಳು** |

ಈ ಮೇಲಿನ ವೆಚ್ಚವನ್ನು 2013–14ನೇ ಸಾಲಿನ ಲೆಕ್ಕಶೀರ್ಷಿಕೆ "2052–00–90–0–26–051" (ಯೋಜನೇತರ) "ಕರ್ನಾಟಕ ಸಕಾಲ ಸೇವೆಗಳ ಅಧಿನಿಯಮ 2011"ರ ಅನುಷ್ಠಾನದಡಿ ಭರಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಆಇ 151 ವೆಚ್ಚ–12/2013, ದಿನಾಂಕ 14–3–2013ರ ಸಹಮತಿಯ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
ಸಿ.ಎ. **ಗಾಯತ್ರಿ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಆಡಳಿತ ಸುಧಾರಣೆ)
(ನಾಗರೀಕ ಸೇವೆಗಳು ಮತ್ತು ರಾಜಕೀಯ ವಿಶ್ರಾಂತಿ ವೇತನ–2)

**P.R. 458**

## COMMERCE AND INDUSTRIES SECRETARIAT

**Subject :** Participation of delegation of officials from Commerce & Industries Department, Government of Karnataka in Investment Round Table - Indonesia, Malaysia & Singapore - reg

**Read :**
1. Single file No: KUM/AD-3/IRT/1031/12-13.
2. Screening Committee decision 16.03.2013

**PREAMBLE:**

Invest India is an organization (jointly organized by FICCI, DIPP and State Governments of India), dedicated to Investment promotion and facilitation. Invest India is organizing round tables in AESAN countries namely Thailand, Indonesia, Vietnam, Malaysia and Singapore between 19th March to 28th March, 2013. Karnataka Udyog Mitra's proposal has been examined and recommended by Commissioner for Industrial Development and Director of Industries and Commerce for participation of a State delegation of officials to participate in the following events.

1. 21st March, 2013 at Jakartha, Indonesia - Investment round table
   a) Sri Girish, Joint Director, Karnataka Udyog Mitra
   b) Smt. Aruni, Deputy Director (DIC)

2. 26th March, 2013 at Kaula Lumpur, Malaysia - Investment round table
   a) Sri M. Prabhu, Additional Director (MSME)
   b) Sri Manjunatha Gowda, Resident Director, Karnataka Udyog Mitra

The team visiting Malaysia will have to go via Singapore and since the next programme of Invest India is on 28th March 2013 at Singapore, the same team may participate in-Singapore event also before their return.

The funding for the participation in the event is done by the funds existing with the Karnataka Udyog Mitra and Government has to accord permission only.

In view of upcoming Global Investors Meet in the month of June 2014 it would be opportunity for us to propogate the investment opportunities in Karnataka. Various other states like Maharastra, Gujarat, Tamil Nadu etc., are participating in this round tables.

The proposal has been examined in detail and hence the following order.

**GOVERNMENT ORDER NO. CI 64 SPI 2013, BANGALORE, DATED 19.03.2013**

In the circumstances explained in the preamble, Government is pleased to accord permission to the following delegations for visiting Investment round table organized by Invest India.

1. 21st March, 2013 at Jakartha, Indonesia - Investment round table
   a) Sri Girish, Joint Director, Karnataka Udyog Mitra
   b) Smt. Aruni, Deputy Director (DIC)
2. 26th March, 2013 at Kaula Lumpur, Malaysia - Investment round table
   a) Sri M. Prabhu, Additional Director (MSME)
   b) Sri Manjunatha Gowda, Resident Director, Karnataka Udyog Mitra

The team visiting Malaysia will have to go via Singapore and since the next programme of Invest India is on 28th March 2013 at Singapore, the same team may participate in Singapore event also before their return. The expenditure for the visit shall be borne by Karnataka Udyog Mitra.

By Order and in the name of the Governor of Karnataka,
**SHIVASHANKARA NAIK. L,**
Desk Officer (Technical Cell),
Commerce & Industries Department.

**P.R. 460**

## COMMERCE AND INDUSTRIES SECRETARIAT

**Subject :** Reimbursement of Central Sales Tax paid on inter-state sale of metro coaches by M/ s BEML Ltd. To Delhi Metro Rail Corporation Ltd., - Reg.

**Read :**
1) G.O. No. FD 283 CSL 2009, dated: 08.12.2009
2) G.O. No. CI 430 SPI 2010, dated: 20.09.2010, 21.02.2011, 21.11.2011 & 16.12.2011.
3) Letter No. AR-1/DMRCL/VAT/2012, dated: 04.09.2012, 21.09.2012, 08.11.2012, 21.11.2012, 05.01.2013 & 31.01.2013 from BEML Ltd., Bangalore.
4) Letter No. AR-1/BMRCL/KVAT/2012, dated: 07.02.2013 from BEML Ltd., Bangalore

**PREAMBLE:**

In the Govt. Order read at (1) above, sanction was accorded for reimbursement of tax paid under the Central Sales Tax Act, 1956 by BEML, on its Inter-State sale of Metro coaches to Delhi Metro Rail Corporation Ltd.

In the G.O's read at (2) above, Rs. 69,78,00,039 (46,88,00,000/- 13,42,64,868/-, 2,24,25,549/- 7,23,09,622/ -) was released towards reimbursement of Central Sales Tax to BEML paid up to March 2011 interest free loan to be converted into grant subsequently.

The BEML Ltd., has submitted the tax paid certificate for the months of May 2012 to November 2012 and has requested to reimburse Rs. 15,82,64,877/-.

**GOVERNMENT ORDER NO. CI 430 SPI 2010, BANGALORE, DATED 28.03.2013**

For the reasons explained above, sanction is hereby accorded for the release of Rs. 2,18,61,223/- (Rupees Two crore Eighteen Lakh Sixty-one thousand Two hundred and Twenty-three only) under the Head of Alc "2852-80-800-0-43 (plan) 059-other

expenses" for the year 2012-13 towards reimbursement of Central Sales Tax to BEML for the months of May 2012 and June 2012 (partly). The remaining part of reimbursement for June 2012 and further will be considered in the next financial year i.e. 2013-14.

The Deputy General Manager (Finance & Accounts), Bangalore Complex, BEML Ltd., is authorised to draw the amount on payee's receipt duly countersigned by Commissioner for Industrial Development and Director of Industries and Commerce Dept.

This order is issued with reference to Finance Department's Note No. FD 42 CSL 2013, dated 26.03.2013.

By Order and in the name of the Governor of Karnataka,
**SHIVASHANKAR NAIK. L,**
Desk Officer (Technical Cell),
Commerce & Industries Department.

**P.R. 461**

## COMMERCE AND INDUSTRIES SECRETARIAT

**Sub :** Repayment of loans for various schemes of Co-operative Development upto the year 2011-12

**Read :** 1. Letter No. NCDC/A&C/X(1)/Rep/2001-02/2287, dated 29-06-2012 from Assistant Director (Loan), NCDC., New Delhi.

2. Letter No. KAI.JA.I/JAM.RI/JATHA/SANUGI/NCDC/MARUPAVA THI/2011-12, dated 28-08-2012 from the Commissioner for Textiles & Director of Handlooms & Textiles, Bangalore

**PREAMBLE:**

The Assistant Director (Loan), National Co-operative Development Corporation, New Delhi, in his letter dated 29-06-2012, read at (1) above, has intimated that a sum of ₹ 1,14,14,750-00 towards regular installment of loan with normal rate of interest, after allowing rebate for timely payment is dure for payment to the NCDC on or before 05-10-2012, against the loans advanced under various schemes under Central Sector/corporation sponsored schemes upto 2011-12. It is also mentioned that rebate will be admissible for timely repayment of loan installment, i.e., before 05-10-2012 and the State Government will have to pay interest at penal rate for the period of delay.

The Commissioner for Textiles & Director of Handlooms & Textiles, Bangalore, vide his letter dated 28-08-2012 read at (2) above, has reported that a sum of ₹ 84,43,100-00 towards principal and ₹ 26,79,424-00 towards interest, totalling ₹ 1,11,22,524-00 is due to be paid to NCDC, New Delhi, in respect of co-operative spinning mills (excluding Sugar) before 05-10-2012 for the year 2011-12.

The proposal has been examined and the following orders are issued.

### GOVERNMENT ORDER NO. CI 15 CIM 2012, BANGALORE DATED: 21-09-2012

In the circumstances explained above, Government is pleased to accord sanction for the release for ₹ 1,11,22,524-00 (Rupees one crore, eleven lakhs, twenty two thousands, five hundred and twenty four only) (₹ 84,43,100-00 principal and ₹ 26,79,424-00 interest) to be payable to NCDC, New Delhi, in respect of various loans to co-operative spinning mills (excluding Sugar) for the year 2011-12.

The above expenditure shall be debitable to the Head of Account “6003-00-108-0-01” (NP) towards principal amount of ₹ 84,43,100-00 and “2049-01-200-02-03” towards interest of ₹ 26,79,424-00.

The Accounts Officer, office of the Commissioner for Textiles & Director of Handlooms & Textiles, Bangalore, is authorised to draw the said amount on payee’s receipt duly countersigned by the Commissioner for Textiles & Director of Handlooms & Textiles, Bangalore, and remit the same to the National Co-operative Development Corporation, New Delhi, before 05-10-2012.

The State Huzur Treasury, Bangalore and the District Treasury, Bangalore (Urban) shall honour the bills immediately.

This order is issued with the concurrence of Finance Department vide its U.O. Note No. FD 248 Exp-2/2012, Dated 11-09-2012.

By Order and in the name of the Governor of Karnataka,
**B. RAMASWAMY,**
Under Secretary to Government,
Commerce & Industries Department. (Co-operative Sugar)

**P.R. 387**

## ಸಹಕಾರ ಸಚಿವಾಲಯ

**ವಿಷಯ:** 2012–13ನೇ ಸಾಲಿನ ಆಯವ್ಯಯದಲ್ಲಿ ಸಹಕಾರ ಇಲಾಖೆಯ ಹೊಸ ಯೋಜನೆಗಳಲ್ಲಿ “ಆರ್ಥಿಕವಾಗಿ ದುರ್ಬಲವಾಗಿರುವ ಮಾರಾಟ, ಗ್ರಾಹಕರ ಮತ್ತು ಸಂಸ್ಕರಣಾ ಸಹಕಾರ ಸಂಘಗಳಿಗೆ ಬಂಡವಾಳ ನೆರವು ಯೋಜನೆ”ಯಲ್ಲಿ ಷೇರು ಬಂಡವಾಳ ರೂಪದಲ್ಲಿ ಧನಸಹಾಯ ಮಂಜೂರು ಮಾಡುವ ಬಗ್ಗೆ

**ಓದಲಾಗಿದೆ:** 1. ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ: ಆರ್‌ಸಿಎಸ್/ಬಳಕೆ/ಎಂಡಬ್ಲ್ಯೂಎಸ್/2012–13, ದಿನಾಂಕ: 26–12–2012 ಮತ್ತು 06–03–2013

2. ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ/09/ವೆಚ್ಚ–2/2013, ದಿನಾಂಕ: 21–02–2013

**ಪ್ರಸ್ತಾವನೆ:**

2012–13ನೇ ಸಾಲಿನ ಆಯವ್ಯಯದಲ್ಲಿ ಸಹಕಾರ ಇಲಾಖೆಯ ಹೊಸ ಯೋಜನೆಗಳಲ್ಲಿ "ಆರ್ಥಿಕವಾಗಿ ದುರ್ಬಲವಾಗಿರುವ ಮಾರಾಟ, ಗ್ರಾಹಕರ ಮತ್ತು ಸಂಸ್ಕರಣಾ ಸಹಕಾರ ಸಂಘಗಳಿಗೆ ಬಂಡವಾಳ ನೆರವು ಯೋಜನೆ"ಯಲ್ಲಿ ಷೇರು ಬಂಡವಾಳ ರೂಪದಲ್ಲಿ ಧನಸಹಾಯ ಮಂಜೂರು ಮಾಡಲು ಓದಲಾದ (1)ರ ಪತ್ರದಲ್ಲಿ ಸಹಕಾರ ಸಂಘಗಳ ಅಪರ ನಿಬಂಧಕರು (ಬಳಕೆ ಮತ್ತು ಮಾರಾಟ) ಇವರು ಕೋರಿರುತ್ತಾರೆ.

ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 09 ವೆಚ್ಚ–2/2013, ದಿನಾಂಕ: 21–02–2013ರಲ್ಲಿ 2012–13ನೇ ಸಾಲಿನಲ್ಲಿ ಆರ್ಥಿಕವಾಗಿ ದುರ್ಬಲವಾಗಿರುವ ಮಾರಾಟ, ಗ್ರಾಹಕರ ಮತ್ತು ಸಂಸ್ಕರಣಾ ಸಹಕಾರ ಸಂಘಗಳಿಗೆ ಬಂಡವಾಳ ನೆರವು ಎಂಬ ಹೊಸ ಯೋಜನೆಯನ್ನು ಅನುಷ್ಠಾನಗೊಳಿಸಲು ಸಲ್ಲಿಸಿರುವ ಪ್ರಸ್ತಾಪವನ್ನು ಒಪ್ಪಿರುತ್ತದೆ.

ಸಹಕಾರ ಸಂಘಗಳ ಅಪರ ನಿಬಂಧಕರು (ಬಳಕೆ ಮತ್ತು ಮಾರಾಟ) ಸಹಕಾರ ಸಂಘಗಳ ನಿಬಂಧಕರ ಕಛೇರಿ, ಇವರು ಅವರ ದಿನಾಂಕ: 06–03–2013 ಪ್ರಸ್ತಾವದಲ್ಲಿ ಆರ್ಥಿಕವಾಗಿ ದುರ್ಬಲವಾಗಿರುವ ಸಹಕಾರ ಸಂಘಗಳಿಗೆ ಬಂಡವಾಳ ನೆರವು ನೀಡುವ ಯೋಜನೆಯಲ್ಲಿ ಷೇರು ಬಂಡವಾಳ ರೂಪದಲ್ಲಿ ಐದು ಅರ್ಹ ವ್ಯವಸಾಯೋತ್ಪನ್ನ ಮಾರಾಟ ಸಹಕಾರ ಸಂಘಗಳಿಗೆ ರೂ. 40.00 ಲಕ್ಷಗಳು ಷೇರು ಬಂಡವಾಳವನ್ನು ಮಂಜೂರು ಮಾಡಲು ಕೋರಿರುತ್ತಾರೆ. ಸಹಕಾರ ಸಂಘಗಳ ಅಪರ ನಿಬಂಧಕರು (ಬಳಕೆ ಮತ್ತು ಮಾರಾಟ) ಅವರ ಪ್ರಸ್ತಾವದಲ್ಲಿ ಸರ್ಕಾರದ ದಿನಾಂಕ: 28–02–2013ರ ಆದೇಶದಲ್ಲಿ ಷರತ್ತುಗಳಿಗನುಗುಣವಾಗಿ ಐದು ಅರ್ಹ ವ್ಯವಸಾಯೋತ್ಪನ್ನ ಮಾರಾಟ ಸಹಕಾರ ಸಂಘಗಳನ್ನು ಆಯ್ಕೆ ಮಾಡಲಾಗಿದ್ದು, ಅದರಂತೆ ಈ ಕೆಳಗೆ ನಮೂದಿಸಿರುವಂತೆ ಷೇರು ಬಂಡವಾಳ ಮಂಜೂರು ಮಾಡಲು ಶಿಫಾರಸ್ಸು ಮಾಡಿರುತ್ತಾರೆ.

**(ರೂ. ಲಕ್ಷಗಳಲ್ಲಿ)**

| ಕ್ರ.ಸಂ. | ಸಂಘಗಳ ಹೆಸರು | ಷೇರು ಬಂಡವಾಳ |
|---|---|---|
| 1. | ಚಿತ್ತಾಪುರ ಟಿಎಪಿಸಿಎಂಎಸ್, ಗುಲ್ಬರ್ಗಾ ಜಿಲ್ಲೆ | 10.00 |
| 2. | ಆಳಂದ ಟಿಎಪಿಸಿಎಂಎಸ್, ಗುಲ್ಬರ್ಗಾ ಜಿಲ್ಲೆ | 10.00 |
| 3. | ಹುಮನಾಬಾದ್ ಟಿಎಪಿಸಿಎಂಎಸ್, ಬೀದರ್ ಜಿಲ್ಲೆ | 10.00 |
| 4. | ಸಕಲೇಶಪುರ ಟಿಎಪಿಸಿಎಂಎಸ್, ಹಾಸನ ಜಿಲ್ಲೆ | 5.00 |
| 5. | ಕುಂದಾಪುರ ಟಿಎಪಿಸಿಎಂಎಸ್, ಉಡುಪಿ ಜಿಲ್ಲೆ | 5.00 |
| | **ಒಟ್ಟು** | **ರೂ. 40.00 ಲಕ್ಷ** |

ಪ್ರಸ್ತಾವವನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಒ 43 ಸಂಮಾಸ 2012, ಬೆಂಗಳೂರು, ದಿನಾಂಕ: 13ನೇ ಮಾರ್ಚ್, 2013**

ಪ್ರಸ್ತಾವನೆ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, 2012–13ನೇ ಸಾಲಿನ ಆಯವ್ಯಯದಲ್ಲಿ ಸಹಕಾರ ಇಲಾಖೆಯ ಹೊಸ ಯೋಜನೆಗಳಲ್ಲಿ "ಆರ್ಥಿಕವಾಗಿ ದುರ್ಬಲವಾಗಿರುವ ಮಾರಾಟ, ಗ್ರಾಹಕರ ಮತ್ತು ಸಂಸ್ಕರಣಾ ಸಹಕಾರ ಸಂಘಗಳಿಗೆ ಬಂಡವಾಳ ನೆರವು ಯೋಜನೆ"ಯಲ್ಲಿ ಪ್ರಸ್ತಾವದಲ್ಲಿ ನಮೂದಿಸಿರುವ ಐದು ವ್ಯವಸಾಯೋತ್ಪನ್ನ ಮಾರಾಟ ಸಹಕಾರ ಸಂಘಗಳಿಗೆ ಪ್ರತಿ ಸಂಘದ ಮುಂದೆ ನಮೂದಿಸಿರುವ ಒಟ್ಟು ರೂ. 40.00 ಲಕ್ಷ (ನಲವತ್ತು ಲಕ್ಷ ರೂಪಾಯಿಗಳು ಮಾತ್ರ) ಷೇರು ಬಂಡವಾಳವನ್ನು ಸರ್ಕಾರದ ದಿನಾಂಕ: 28–02–2013ರ ಆದೇಶದ ಷರತ್ತುಗಳಿಗೊಳಪಟ್ಟು ಮಂಜೂರು ಮಾಡಿದೆ.

ಈ ವೆಚ್ಚವನ್ನು 2012–13ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4425–00–108–0–57 ಆರ್ಥಿಕವಾಗಿ ದುರ್ಬಲವಾಗಿರುವ ಮಾರಾಟ, ಗ್ರಾಹಕರ ಮತ್ತು ಸಂಸ್ಕರಣಾ ಸಹಕಾರ ಸಂಘಗಳಿಗೆ ಬಂಡವಾಳ ನೆರವು ಯೋಜನೆಯಲ್ಲಿ ಭರಿಸತಕ್ಕದ್ದು.

ಈ ಹಣವನ್ನು ಸಹಕಾರ ಸಂಘಗಳ ಅಪರ ನಿಬಂಧಕರು (ಬಳಕೆ ಮತ್ತು ಮಾರಾಟ), ಸಹಕಾರ ಸಂಘಗಳ ನಿಬಂಧಕರ ಕಛೇರಿ, ಬೆಂಗಳೂರು ಇವರು ಹಣ ಸಂದಾಯ ರಸೀದಿ ಮೂಲಕ ಸಹಕಾರ ಸಂಘಗಳ ನಿಬಂಧಕರ ಮೇಲು ರುಜು ಸಹಿ ಪಡೆದು ಖಜಾನೆಯಿಂದ ಪಡೆಯತಕ್ಕದ್ದು. ಖಜಾನೆಯಿಂದ ಡ್ರಾ ಮಾಡಿದ ಮೊತ್ತವನ್ನು ಕರ್ನಾಟಕ ರಾಜ್ಯ ಸಹಕಾರ ಅಪೆಕ್ಸ್ ಬ್ಯಾಂಕ್ ನಿಯಮಿತ, ಬೆಂಗಳೂರು ಇಲ್ಲಿ ಠೇವಣಿಸತಕ್ಕದ್ದು. ಸಹಕಾರ ಸಂಘಗಳ ನಿಬಂಧಕರು ಸದರಿ ಹಣವನ್ನು ಸಂಬಂಧಪಟ್ಟ ಸಂಸ್ಥೆಗಳಿಗೆ ಬಿಡುಗಡೆ ಮಾಡಿ ಉಪಯೋಗ ಪ್ರಮಾಣ ಪತ್ರಗಳನ್ನು ಪಡೆದು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯು ದಿನಾಂಕ: 12–03–2013ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ.ಎಸ್. ರಮಣರೆಡ್ಡಿ,**

ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ,
ಸಹಕಾರ ಇಲಾಖೆ.

P.R. 475
SC - 100

## ಶಿಕ್ಷಣ ಸಚಿವಾಲಯ

**ವಿಷಯ:** ಶ್ರೀ ಎಸ್.ಎ. ಲಮಾಣಿ, ನಿವೃತ್ತ ಕ್ಷೇತ್ರ ಶಿಕ್ಷಣಾಧಿಕಾರಿ, ಸಾರ್ವಜನಿಕ ಶಿಕ್ಷಣ ಇಲಾಖೆ, ಬಸವನ ಬಾಗೇವಾಡಿ, ವಿಜಾಪುರ ಜಿಲ್ಲೆ, ಇವರು ಖಾಸಗಿ ಪ್ರಾಥಮಿಕ ಶಾಲೆಯಲ್ಲಿ ವಿಜಾಪುರ ಜಿಲ್ಲೆಯಲ್ಲಿ ಭಾಗಿಯಾದ ಅವ್ಯವಹಾರ/ಆರೋಪಗಳ ಮೇಲಿನ ಶಿಸ್ತು ಕ್ರಮದಲ್ಲಿನ ಅಂತಿಮ ಆದೇಶ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಇಡಿ 102 ಡಿಜಿಡಿ 1999 (ಭಾಗ-3), ದಿನಾಂಕ: 05-05-2004
2. ಸರ್ಕಾರದ ಆದೇಶ ಸಂಖ್ಯೆ: ಇಡಿ 102 ಡಿಜಿಡಿ 1999, ದಿನಾಂಕ: 20-01-2005
3. ಸರ್ಕಾರದ ಆದೇಶ ಸಂಖ್ಯೆ: ಇಡಿ 102 ಡಿಜಿಡಿ 1999, ದಿನಾಂಕ: 01-08-2006.
4. ಶ್ರೀ ಬಿ.ಎಲ್. ಶ್ರೀಕಂಠಯ್ಯ, ನಿವೃತ್ತ ಜಿಲ್ಲಾ ಮತ್ತು ಸೆಷನ್ ನ್ಯಾಯಾಧೀಶರು, ಇವರ ವಿಚಾರಣಾ ವರದಿ ದಿನಾಂಕ: 17-08-2007
5. ಶ್ರೀ ಎಸ್.ಎ. ಲಮಾಣಿ, ನಿವೃತ್ತ ಕ್ಷೇತ್ರ ಶಿಕ್ಷಣಾಧಿಕಾರಿ, ಸಾರ್ವಜನಿಕ ಶಿಕ್ಷಣ ಇಲಾಖೆ, ಬಸವನ ಬಾಗೇವಾಡಿ, ವಿಜಾಪುರ ಜಿಲ್ಲೆ ಇವರ ಮನವಿ ಪತ್ರ ದಿನಾಂಕ: 10-01-2011, 21-01-2011, 20-11-2012 ಮತ್ತು 23-01-2013
6. ಅಪರ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಧಾರವಾಡ, ಇವರ ಪತ್ರ ಸಂಖ್ಯೆ: ಜಿ12:ಖಾ.ಶಿಅ:ಶಿ.ಕ್ರ: 57/2010-11/3398, ದಿನಾಂಕ: 07-01-2011, 03-10-2012 ಮತ್ತು 18-01-2013

**ಪ್ರಸ್ತಾವನೆ:**

1) ಬಿಜಾಪುರ ಜಿಲ್ಲೆಯ ಖಾಸಗಿ ಅನುದಾನಿತ ಪ್ರಾಥಮಿಕ ಶಾಲಾ ಶಿಕ್ಷಣ ಸಂಸ್ಥೆಗಳಲ್ಲಿನ ಶಿಕ್ಷಕರ ನೇಮಕಾತಿಯಲ್ಲಿ ಅವ್ಯವಹಾರ ನಡೆದಿದೆ ಎನ್ನಲಾದ ಆರೋಪಕ್ಕೆ ಸಂಬಂಧಿಸಿದಂತೆ ಶಿಕ್ಷಣ ಇಲಾಖೆಯ 24 ಅಧಿಕಾರಿಗಳ ವಿರುದ್ಧ ಮೇಲೆ (1)ರಲ್ಲಿ ಓದಲಾದ ದಿನಾಂಕ: 05-05-2004ರ ಆದೇಶದಲ್ಲಿ ಶ್ರೀ ವೈ.ಆರ್. ಸಾಹುಕಾರ, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಬೆಂಗಳೂರು, ಇವರನ್ನು ವಿಚಾರಣಾಧಿಕಾರಿಯೆಂದು ನೇಮಿಸಲಾಗಿತ್ತು. ನಂತರ ಮೇಲೆ (2)ರಲ್ಲಿ ಓದಲಾದ ದಿನಾಂಕ: 20-01-2005ರ ಆದೇಶದಲ್ಲಿ 24 ಅಧಿಕಾರಿಗಳ ಜಂಟಿ ಇಲಾಖಾ ವಿಚಾರಣೆಯನ್ನು ಮಾರ್ಪಡಿಸಿ, 24 ಪ್ರತ್ಯೇಕ ಪ್ರಕರಣಗಳೆಂದು ಆದೇಶಿಸಿದೆ. ಶ್ರೀ ವೈ.ಆರ್. ಸಾಹುಕಾರ್‌ರವರನ್ನು ಇಲಾಖಾ ವಿಚಾರಣೆ-ನಡೆಸುವ ಅಧಿಕಾರಿಗಳ ಪಟ್ಟಿಯಿಂದ ತೆಗೆದುಹಾಕಿದ ಕಾರಣದಿಂದ ಮೇಲೆ (3)ರಲ್ಲಿ ಓದಲಾದ ದಿನಾಂಕ: 01-08-2006ರ ಆದೇಶದಲ್ಲಿ ಶ್ರೀ ಬಿ.ಎಲ್. ಶ್ರೀಕಂಠಯ್ಯ, ನಿವೃತ್ತ ಜಿಲ್ಲಾ ಸೆಷನ್ ನ್ಯಾಯಾಧೀಶಕರು, ಬೆಂಗಳೂರು ಇವರನ್ನು ವಿಚಾರಣಾಧಿಕಾರಿ ಎಂದು ನೇಮಿಸಲಾಗಿತ್ತು. ಸದರಿ ಆದೇಶದಲ್ಲಿ ಶ್ರೀ ಎಸ್.ಎ. ಲಮಾಣಿ, ನಿವೃತ್ತ ಕ್ಷೇತ್ರ ಶಿಕ್ಷಣಾಧಿಕಾರಿ, ಸಾರ್ವಜನಿಕ ಶಿಕ್ಷಣ ಇಲಾಖೆ, ಹಿಂದಿನ ಸಹಾಯಕ ಶಿಕ್ಷಣಾಧಿಕಾರಿಗಳು, ಬಸವನ ಬಾಗೇವಾಡಿ, ವಿಜಾಪುರ ಜಿಲ್ಲೆ ಇವರು ಈ ಹಿಂದೆ ದಿನಾಂಕ: 01-08-1991 ರಿಂದ 12-06-1994ರ ಅವಧಿಯಲ್ಲಿ ವಿಜಾಪುರ ಗ್ರಾಮೀಣ ವಲಯದ ಸಾರ್ವಜನಿಕ ಶಿಕ್ಷಣ ಇಲಾಖೆ, ಬಸವನ ಬಾಗೇವಾಡಿ ಇಲ್ಲಿ ಸಹಾಯಕ ಶಿಕ್ಷಣ ಅಧಿಕಾರಿಯಾಗಿ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ ಸರ್ಕಾರದ ಆರ್ಥಿಕ ಮಿತವ್ಯಯದ ಸಂಬಂಧ ಎಫ್.ಡಿ. 7 ಡಿಎಂ-87, ದಿನಾಂಕ: 10-11-1987 ಮತ್ತು ಸಾರ್ವಜನಿಕ ಶಿಕ್ಷಣ ಇಲಾಖೆ ಆಯುಕ್ತರ ಆದೇಶ ದಿನಾಂಕ: 28-11-1987ರ ಅನುಸಾರ ಯಾವುದೇ ಹೊಸ ಹುದ್ದೆ ತುಂಬಲು ನಿಷೇಧವಿದ್ದು, ಈ ಆದೇಶಗಳನ್ನು ಪಾಲಿಸದೇ ತಮ್ಮ ಅಧಿಕಾರದ ವ್ಯಾಪ್ತಿಯಲ್ಲಿ ಬರುವ ಖಾಸಗಿ ಪ್ರಾಥಮಿಕ ಶಾಲೆಗಳ ಒಟ್ಟು 14 ಶಿಕ್ಷಕರ ನೇಮಕಾತಿ ಮಾಡಿ ಆಯುಕ್ತರ ಅನುಮತಿ ಇಲ್ಲದೆ ನೇಮಕವಾದ ಶಿಕ್ಷಕರಿಗೆ ಸರ್ಕಾರದ ಮಿತವ್ಯಯ ನೀತಿಗೆ ವ್ಯತಿರಿಕ್ತವಾಗಿ ವೇತನ ಬಿಡುಗಡೆ ಮಾಡಿದ ಆರೋಪ ಹೊಂದಿರುತ್ತಾರೆ. ಈ ಬಗ್ಗೆ ಆರೋಪಣಾ ಪಟ್ಟಿ ಜಾರಿಯಾದ ಮೇಲೆ ಆರೋಪಿತ ಅಧಿಕಾರಿಯು ಆರೋಪಗಳನ್ನು ಅಲ್ಲೆಗಳೆದು ಸಮಜಾಯಿಷಿ ನೀಡಿರುತ್ತಾರೆ. ಈ ಹಿನ್ನೆಲೆಯಲ್ಲಿ ಪ್ರಕರಣದ ಸತ್ಯಾಸತ್ಯತೆಯನ್ನು ಅರಿಯಲು ದಿನಾಂಕ: 01-08-2006ರ ಆದೇಶದಲ್ಲಿ ಶ್ರೀ ಬಿ.ಎಲ್. ಶ್ರೀಕಂಠಯ್ಯ, ನಿವೃತ್ತ ಜಿಲ್ಲಾ ಸೆಷನ್ ನ್ಯಾಯಾಧೀಶಕರು, ಬೆಂಗಳೂರು ಇವರನ್ನು ವಿಚಾರಣಾಧಿಕಾರಿ ಎಂದು ನೇಮಿಸಲಾಗಿತ್ತು. ನಂತರ ದಿನಾಂಕ: 17-08-2007ರ ವಿಚಾರಣಾ ವರದಿಯಲ್ಲಿ ವಿಚಾರಣಾಧಿಕಾರಿಗಳು "ದೋಷಾರೋಪಣ ಪಟ್ಟಿಯಲ್ಲಿ ಹೇಳಿರುವಂತೆ ಆರೋಪಕ್ಕೆ ಸಂಬಂಧಪಟ್ಟ ದಿನಾಂಕಗಳು 1991 ಅಕ್ಟೋಬರ್, ನವೆಂಬರ್, 1992 ಜುಲೈ ಮತ್ತು ಅಕ್ಟೋಬರ್ 1993" ಆಗಿದ್ದು, ಆರೋಪಿತ ಅಧಿಕಾರಿಯು ಸೇವೆಯಿಂದ ನಿವೃತ್ತಿಯಾದ ದಿನಾಂಕ: 31-8-1999 ಆಗಿದ್ದು, ದೋಷಾರೋಪಣ ಪಟ್ಟಿ ಆರೋಪಿತದ ಅಧಿಕಾರಿಗೆ ಜಾರಿಯಾಗಿರುವ ದಿನಾಂಕ: 26-07-2003 ಆಗಿರುವುದರಿಂದ ಘಟನೆ ಜರುಗಿದ 11, 12 ವರ್ಷಗಳು ಗತಿಸಿದ ನಂತರವಾಗಿರುತ್ತದೆ. ಆದ್ದರಿಂದ ಈ ಹಿನ್ನೆಲೆಯಲ್ಲಿ ದೋಷಾರೋಪಣಾ ಪಟ್ಟಿಯು ಬಾರ್ಡ್ ಬೈ ಲಿಮಿಟೇಷನ್ ಎಂದು ಆರೋಪಿತ ಅಧಿಕಾರಿಯು ನಿರ್ದೋಷಿ ಎಂದು ನಿರ್ಧರಿಸಿದ್ದೇನೆ ಎಂದು ತಮ್ಮ ವರದಿಯಲ್ಲಿ ತಿಳಿಸಿರುತ್ತಾರೆ.

2) ಮೇಲೆ (5)ರಲ್ಲಿ ಓದಲಾದ ದಿನಾಂಕ: 10-01-2011, 21-01-2011, 20-11-2012 ಮತ್ತು 23-01-2013ರಲ್ಲಿ ಸರ್ಕಾರಕ್ಕೆ ಸಲ್ಲಿಸಿರುವ ಮನವಿಯಲ್ಲಿ ಇಲಾಖೆಯ ವಿಚಾರಣಾಧಿಕಾರಿಗಳ ವರದಿಯಲ್ಲಿ ದೋಷ ಮುಕ್ತನಾಗಿದ್ದು ಹಾಗೂ ಈ ಕುರಿತು ಬಿಜಾಪುರದಲ್ಲಿ ಗೋಲ್‌ಗುಂಬಸ್ ಪೊಲೀಸ್ ಠಾಣೆಯಲ್ಲಿ ಕ್ರಿಮಿನಲ್ ಮೊಕದ್ದಮೆ ಸಂಖ್ಯೆ: 104/2004, ದಿನಾಂಕ: 05-09-2011ರಂದು 14 ಅಧಿಕಾರಿಗಳ ಮೇಲೆ ಮೊಕದ್ದಮೆ ದಾಖಲಾಗಿದ್ದು, ಅದರಲ್ಲಿ ತಾನು ಇರುವುದಿಲ್ಲ ಹಾಗೂ ಸಾಕ್ಷಿ ಪುರಾವೆಗಳು ಆಗದೇ ಇರುವುದರಿಂದ ದೋಷಾರೋಪಣೆ ಪತ್ರದಿಂದ ಕೈಬಿಡಲಾಗಿದೆ ಎಂಬ ಪ್ರತ್ಯೇಕ ಪುರವಣಿಯಲ್ಲಿ 18 ಜನರ ಹೆಸರಿನಲ್ಲಿ ಕ್ರಮ ಸಂಖ್ಯೆ: 7ರಲ್ಲಿ ತನ್ನ ಹೆಸರು ಇರುತ್ತದೆ ಎಂದು, ಈ ಕಾರಣದಿಂದ ತಾನು ಎಲ್ಲಾ ಇಲಾಖಾ ವಿಚಾರಣೆ, ದೋಷಾರೋಪಣಾ ಪತ್ರದಿಂದ ಕೈಬಿಟ್ಟಿರುವುದರಿಂದ, ಆರೋಪ ಮುಕ್ತನಾಗಿರುವುದರಿಂದ ನಿವೃತ್ತಿ ಸಮಯದಲ್ಲಿ ತಡೆಹಿಡಿಯಲಾದ ಎಲ್ಲಾ ಹಣಕಾಸು ಸೌಲಭ್ಯಗಳನ್ನು ಬಿಡುಗಡೆ ಮಾಡಬೇಕೆಂದು ವಿನಂತಿಸಿಕೊಂಡಿರುತ್ತಾರೆ.

3) ಮೇಲೆ (6)ರಲ್ಲಿ ಓದಲಾದ ದಿನಾಂಕ: 07-01-2011, 03-10-2012 ಮತ್ತು 18-01-2013ರ ಪತ್ರದಲ್ಲಿ ಅಪರ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಧಾರವಾಡ, ಇವರು ಈ ಪ್ರಕರಣದ ಶಿಸ್ತು ಪ್ರಕರಣದ ಕುರಿತು ವಿಜಾಪುರದಲ್ಲಿ ಗೋಲ್‌ಗುಂಬಸ್ ಪೊಲೀಸ್ ಠಾಣೆಯಲ್ಲಿ ಕ್ರಿಮಿನಲ್ ಮೊಕದ್ದಮೆ ಸಂಖ್ಯೆ: 104/2004, ದಿನಾಂಕ: 05-09-2011ರಂದು 14 ಅಧಿಕಾರಿಗಳ ಮೇಲೆ ಮೊಕದ್ದಮೆ ದಾಖಲಾಗಿದ್ದು, ಇದರಲ್ಲಿ ಆರೋಪಿತ ಅಧಿಕಾರಿಯ ಹೆಸರು ಇರುವುದಿಲ್ಲ ಹಾಗೂ ಸಾಕ್ಷಿ ಪುರಾವೆಗಳು ಆಗದೇ ಇರುವುದರಿಂದ ದೋಷಾರೋಪಣಾ ಪಟ್ಟಿಯಲ್ಲಿ ಕೈಬಿಡಲಾಗಿದೆ ಎಂಬ ಪ್ರತ್ಯೇಕ ಪುರವಣಿಯಲ್ಲಿ 18 ಜನರ ಹೆಸರಿನಲ್ಲಿ

ಕ್ರಮ ಸಂಖ್ಯೆ: 7ರಲ್ಲಿ ಅಧಿಕಾರಿಯ ಹೆಸರು ಇದ್ದು, ಬಿಜಾಪುರದ 3ನೇ ಜೆಎಂಎಫ್‌ಸಿ ನ್ಯಾಯಾಲಯದಲ್ಲಿ ದಾಖಲಾಗಿರುವ ಸಿಸಿ ಸಂಖ್ಯೆ: 1907/2011ರ ದಿನಾಂಕ: 15-09-2011ರ ಆದೇಶದಂತೆ ಅಗತ್ಯ ಕ್ರಮಕ್ಕಾಗಿ ವರದಿ ಸಲ್ಲಿಸಿದ್ದಾರೆ.

ಈ ಪ್ರಕರಣವನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 10 ಡಿಜಿಪಿ 2011, ಬೆಂಗಳೂರು, ದಿನಾಂಕ: 15ನೇ ಮಾರ್ಚ್, 2013.**

4) ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ವಿಚಾರಣಾಧಿಕಾರಿಗಳ ವರದಿಯಲ್ಲಿ ವಿಚಾರಣಾಧಿಕಾರಿಗಳು "ಆರೋಪ ಪಟ್ಟಿಯನ್ನೇ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ-214ರಂತೆ ಸಲ್ಲಿಸಿರುವುದರಿಂದ ಈ ದೋಷಾರೋಪಣಾ ಪಟ್ಟಿಯು ನಿಗದಿತ ಅವಧಿಯಲ್ಲಿ ಜಾರಿಗೊಳಿಸದೇ ಇರುವುದರಿಂದ ಈ ದೋಷಾರೋಪಣಾ ಪಟ್ಟಿಯು ನಿಲ್ಲತಕ್ಕದ್ದಲ್ಲ ಮತ್ತು ಈ ಕಾರಣದಿಂದ ದೋಷಾರೋಪಣಾ ಪಟ್ಟಿಯು ಬಾರ್ಡ್ ಬೈ ಲಿಮಿಟೇಷನ್" ಎಂದು ತೀರ್ಪಿತ್ತಿರುವ ಹಿನ್ನೆಲೆಯಲ್ಲಿ ಮತ್ತು ಬಿಜಾಪುರರ 3ನೇ ಜೆಎಂಎಫ್‌ಸಿ ನ್ಯಾಯಾಲಯದಲ್ಲಿ ದಾಖಲಾಗಿರುವ ಸಿಸಿ ಸಂಖ್ಯೆ: 1907/2011ರ ಪ್ರಕರಣದಲ್ಲಿ ಬರಬಹುದಾದ ಅಂತಿಮ ತೀರ್ಪಿನ ಷರತ್ತಿಗೆ ಒಳಪಟ್ಟು, ಶ್ರೀ ಎಸ್.ಎ. ಲಮಾಣಿ, ನಿವೃತ್ತ ಕ್ಷೇತ್ರ ಶಿಕ್ಷಣಾಧಿಕಾರಿ, ಸಾರ್ವಜನಿಕ ಶಿಕ್ಷಣ ಇಲಾಖೆ, ಬಸವನ ಬಾಗೇವಾಡಿ, ವಿಜಾಪುರ ಜಿಲ್ಲೆ ಇವರನ್ನು ದಿನಾಂಕ: 20-01-2005, ಸಂಖ್ಯೆ: ಇಡಿ 102 ಡಿಜಿಡಿ 99ರ ಸರ್ಕಾರಿ ಆದೇಶದಲ್ಲಿ ನಮೂದಿಸಿರುವ ಆಪಾದನೆಗಳಿಂದ ದೋಷಮುಕ್ತರನ್ನಾಗಿಸಿ, ಆದೇಶಿಸಲಾಗಿದೆ ಮತ್ತು ಈ ವಿಚಾರಣೆ ನಡೆಯದಿದ್ದಲ್ಲಿ, ಅರೋಪಿತ ಅಧಿಕಾರಿಯಾದ ಶ್ರೀ ಎಸ್.ಎ. ಲಮಾಣಿ, ನಿವೃತ್ತ ಕ್ಷೇತ್ರ ಶಿಕ್ಷಣಾಧಿಕಾರಿ, ಸಾರ್ವಜನಿಕ ಶಿಕ್ಷಣ ಇಲಾಖೆ, ಬಸವನ ಬಾಗೇವಾಡಿ, ವಿಜಾಪುರ ಜಿಲ್ಲೆ ಇವರು ಯಾವ ಸೌಲಭ್ಯಗಳನ್ನು ಪಡೆಯಲು ಅರ್ಹರಿದ್ದರೋ ಅಂತಹ ಎಲ್ಲಾ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಾರೆ ಎಂದು ಅದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಶ್ರೀಪಾದು ಹೆಚ್.ಎನ್.**

ಸರ್ಕಾರದ ಅಧೀನ ಕಾರ್ಯದರ್ಶಿ,

ಶಿಕ್ಷಣ ಇಲಾಖೆ. (ಆಡಳಿತ)

P.R. 470

SC - 50

## ಕಾರ್ಮಿಕ ಸಚಿವಾಲಯ

**ವಿಷಯ :** ಕಾರ್ಖಾನೆಗಳು, ಬಾಯ್ಲರುಗಳು, ಕೈಗಾರಿಕಾ ಸುರಕ್ಷತೆ ಮತ್ತು ಸ್ವಾಸ್ಥ್ಯ ಇಲಾಖೆಯಲ್ಲಿ ಹಾಲಿ ಚಾಲ್ತಿಯಲ್ಲಿರುವ ಮತ್ತು ಹೊಸದಾದ ಯೋಜನೆಗಳನ್ನು / ಕಾರ್ಯಕ್ರಮಗಳನ್ನು ಜಾರಿಮಾಡಲು, ಕಾನೂನುಗಳನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ದುರಂತ / ಅವಘಡಗಳನ್ನು ನಿಯಂತ್ರಿಸಲು ಹಾಗೂ ಸುಮಾರು 20 ಲಕ್ಷ ಕಾರ್ಮಿಕರಿಗೆ ಕಾಯ್ದೆಯನ್ವಯ ದೊರಕಬೇಕಾದ ಸೌಲಭ್ಯಗಳನ್ನು ಒದಗಿಸಲು ಸಹಕಾರಿಯಾಗುವಂತೆ ಇಲಾಖೆಯ ಗ್ರೂಪ್ "ಎ" ದರ್ಜೆಯ ಹಿರಿಯ ಮತ್ತು ಕಿರಿಯ ಕ್ಷೇತ್ರಾಧಿಕಾರಿಗಳಿಗೆ ಬಾಡಿಗೆ ಆಧಾರದ ಮೇಲೆ ವಾಹನ ಒದಗಿಸಲು ಮಂಜೂರಾತಿ ನೀಡುವ ಬಗ್ಗೆ

**ಓದಲಾಗಿದೆ :**
1. ನಿರ್ದೇಶಕರು, ಕಾರ್ಖಾನೆಗಳು, ಬಾಯ್ಲರುಗಳು, ಕೈಗಾರಿಕಾ ಸುರಕ್ಷತೆ ಮತ್ತು ಸ್ವಾಸ್ಥ್ಯ ಇಲಾಖೆ ರವರ ಪ್ರಸ್ತಾವನೆ ಸಂಖ್ಯೆ: ಕಾಬಾನಿ/ಇಎಸ್‌ಟಿ-1/ಇತರೆ/ಸಿಆರ್-128/2012-2013, ದಿನಾಂಕ 08-02-2013
2. ಸರ್ಕಾರದ ಪತ್ರದ ಸಂಖ್ಯೆ: ಕಾಇ 62 ಕಾಬಾಸೇ 2012, ದಿನಾಂಕ: 08-11-2012

**ಪ್ರಸ್ತಾವನೆ:**

ಮೇಲೆ ಕ್ರಮಾಂಕ (1)ರಲ್ಲಿ ಓದಲಾದ ದಿನಾಂಕ: 08-02-2013ರ ಕಾರ್ಖಾನೆಗಳು, ಬಾಯ್ಲರುಗಳು, ಕೈಗಾರಿಕಾ ಸುರಕ್ಷತೆ ಮತ್ತು ಸ್ವಾಸ್ಥ್ಯ ಇಲಾಖೆಯ ನಿರ್ದೇಶಕರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ವಿಭಾಗೀಯ ಕಛೇರಿಗಳಲ್ಲಿ ಕೆಲಸಗಳನ್ನು ಸಕಾಲದಲ್ಲಿ ನಿರ್ವಹಿಸಲು, ವಿಭಾಗೀಯ ಕಛೇರಿಗಳು ಕೇಂದ್ರ ಸ್ಥಾನದಿಂದ ನಿರ್ದಿಷ್ಟಪಡಿಸಿರುವ ಕ್ಷೇತ್ರ ಪರಿಮಿತಿಗಳ ನಡುವಿನ ದೂರ ಅಧಿಕವಾಗಿದ್ದು ಶೀಘ್ರವಾಗಿ ತಲುಪಬೇಕಾಗಿದ್ದು, ರಾಜ್ಯದಲ್ಲಿನ ಕಾರ್ಖಾನೆಗಳು/ಬಾಯ್ಲರುಗಳು ಹಾಗೂ ಕಟ್ಟಡ ಮತ್ತು ಇತರೆ ನಿರ್ಮಾಣ ಕಾಮಗಾರಿ ಯೋಜನೆಗಳನ್ನು ಕಾಲಾನುಕಾಲಕ್ಕೆ ಪರಿವೀಕ್ಷಣೆ ನಡೆಸಿ ಪ್ರಸ್ತಾಪಿತ ಕಾಯ್ದೆಗಳನ್ನು ಸಮರ್ಪಕವಾಗಿ ಅನುಷ್ಠಾನಗೊಳಿಸಿ ಕಾರ್ಮಿಕರಿಗೆ/ಸಾರ್ವಜನಿಕರಿಗೆ ಸೌಲಭ್ಯ/ಸೇವೆಗಳನ್ನು ಪರಿಣಾಮಕಾರಿಯಾಗಿ ಒದಗಿಸುವ ಜೊತೆಗೆ, ಈಗಿನ ಇಲಾಖೆಯ ರೂ. 16 ಕೋಟಿಯ ಆದಾಯವನ್ನು ಎರಡರಷ್ಟು ಉತ್ಪತ್ತಿ ಮಾಡಲು ವಿಪುಲ ಅವಕಾಶಗಳಿವೆಯೆಂದು, ಪ್ರಸ್ತುತ ನಿರ್ದೇಶಕರು, ಜಂಟಿ ನಿರ್ದೇಶಕರಿಗೆ ಮಾತ್ರ ಸರ್ಕಾರಿ ವಾಹನವಿದ್ದು, ಇಲಾಖೆಯ ಇನ್ನಿತರ ಕ್ಷೇತ್ರಾಧಿಕಾರಿಗಳು ಸಾರ್ವಜನಿಕ ಸಾರಿಗೆಯನ್ನೇ ಬಳಸುತ್ತಿದ್ದು, ಮೇಲಿನ ಗುರಿಗಳನ್ನು ಸಾಧಿಸಲು ಹಿನ್ನಡೆಯಾಗಿರುತ್ತದೆಂದು, ಕಾರ್ಮಿಕ ಸಚಿವಾಲಯವು ಇದನ್ನು ಮನಗಂಡು ಮೊದಲ ಹಂತವಾಗಿ ನಿರ್ದೇಶಕರ ಪ್ರಸ್ತಾವನೆಯ ಕೋಷ್ಟಕದಲ್ಲಿ ನಮೂದಿಸಿರುವ ಕ್ರಮಸಂಖ್ಯೆ 1, 2, 3 ಮತ್ತು 4 ರಲ್ಲಿನ ಇಲಾಖೆಯ ಗ್ರೂಪ್ "ಎ" ದರ್ಜೆಯ ಹಿರಿಯ ಮತ್ತು ಕಿರಿಯ ಹುದ್ದೆಗಳ ಕ್ಷೇತ್ರಾಧಿಕಾರಿಗಳಿಗೆ ಬಾಡಿಗೆ ಆಧಾರದ ಮೇಲೆ ವಾಹನ ಒದಗಿಸುವುದರಿಂದ ಮೇಲಿನ ಗುರಿಗಳನ್ನು ಸಾಧಿಸಬಹುದಾಗಿದೆಯೆಂದು ತಾತ್ವಿಕವಾಗಿ ಒಪ್ಪಿರುವ ಹಿನ್ನೆಲೆಯಲ್ಲಿ ಸಾರ್ವಜನಿಕ ಹಿತದೃಷ್ಟಿಯಿಂದ ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಾಇ 16 ಕಾಬಾಸೇ 2013, ಬೆಂಗಳೂರು, ದಿನಾಂಕ: 30ನೇ ಮಾರ್ಚ್, 2013**

ಮೇಲೆ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ ಕಾರ್ಖಾನೆಗಳು, ಬಾಯ್ಲರುಗಳು, ಕೈಗಾರಿಕಾ ಸುರಕ್ಷತೆ ಮತ್ತು ಸ್ವಾಸ್ಥ್ಯ ಇಲಾಖೆಯಲ್ಲಿ ವಿಭಾಗೀಯ ಕಛೇರಿಗಳಲ್ಲಿ ಕೆಲಸಗಳನ್ನು ಸಕಾಲದಲ್ಲಿ ನಿರ್ವಹಿಸಲು, ವಿಭಾಗೀಯ ಕಛೇರಿಗಳು ಕೇಂದ್ರ ಸ್ಥಾನದಿಂದ ನಿರ್ದಿಷ್ಟಪಡಿಸಿರುವ ಕ್ಷೇತ್ರ ಪರಿಮಿತಿಗಳ ನಡುವಿನ ದೂರ ಅಧಿಕವಾಗಿದ್ದು ಶೀಘ್ರವಾಗಿ ತಲುಪಲು ಮತ್ತು ಪ್ರಸ್ತಾಪಿತ ಕಾಯ್ದೆಗಳನ್ನು ಸಮರ್ಪಕವಾಗಿ ಅನುಷ್ಠಾನಗೊಳಿಸಿ ಕಾರ್ಮಿಕರಿಗೆ/ಸಾರ್ವಜನಿಕರಿಗೆ ಸೌಲಭ್ಯ/ಸೇವೆಗಳನ್ನು ಪರಿಣಾಮಕಾರಿಯಾಗಿ ಒದಗಿಸುವ ಹಿನ್ನೆಲೆಯಲ್ಲಿ ಕ್ರಮಾಂಕ(1) ರಲ್ಲಿ ಓದಲಾದ ದಿನಾಂಕ: 08-02-3013ರ ನಿರ್ದೇಶಕರ

ಪ್ರಸ್ತಾವನೆಯಲ್ಲಿನ ಕೋಷ್ಟಕದ ಕ್ರಮ ಸಂಖ್ಯೆ 1, 2, 3 ಮತ್ತು 4 ರಲ್ಲಿ ನಮೂದಿಸಿರುವ, ಕೆಳಕಂಡ ಕೋಷ್ಠಕದ ಕಾಲಂ–2ರಲ್ಲಿನ ಹುದ್ದೆಗಳ ಕ್ಷೇತ್ರಾಧಿಕಾರಿಗಳಿಗೆ ದಿನಾಂಕ: 01–04–2013ರಿಂದ ಜಾರಿಗೆ ಬರುವಂತೆ ವಾಹನ ಭತ್ಯೆ ತಿಂಗಳಿಗೆ ರೂ. 30,000/–ರಂತೆ ಬಾಡಿಗೆ ಆಧಾರದ ಮೇಲೆ ವಾಹನ ಒದಗಿಸಲು, ತಾತ್ವಿಕವಾಗಿ ಒಪ್ಪಿಗೆ ನೀಡಿ ಆದೇಶ ಹೊರಡಿಸಿದೆ.

| ಕ್ರಮ ಸಂಖ್ಯೆ | ವೃಂದ ಕ್ಷೇತ್ರಾಧಿಕಾರಿಗಳ ಪದನಾಮ | ಅಧಿಕಾರಿಗಳ ಸಂಖ್ಯೆ | ತಿಂಗಳ ಆವರ್ತ ವೆಚ್ಚ ಲಕ್ಷಗಳಲ್ಲಿ | ವಾರ್ಷಿಕ ಆವರ್ತ ವೆಚ್ಚ ಲಕ್ಷಗಳಲ್ಲಿ |
|---|---|---|---|---|
| **1** | **2** | **3** | **4** | **5** |
| 1. | ಕಾರ್ಖಾನೆಗಳ ಉಪ ನಿರ್ದೇಶಕರು | 8 | 2.4 | 28.8 |
| 2. | ಬಾಯ್ಲರುಗಳ ಉಪ ನಿರ್ದೇಶಕರು | 2 | 0.6 | 7.2 |
| 3. | ಕಾರ್ಖಾನೆಗಳ ಹಿರಿಯ ಸಹಾಯಕ ನಿರ್ದೇಶಕರು | 9 | 2.7 | 32.4 |
| 4. | ಬಾಯ್ಲರುಗಳ ಹಿರಿಯ ಸಹಾಯಕ ನಿರ್ದೇಶಕರು | 4 | 1.2 | 14.4 |
| | | **23** | **6.9** | **82.8** |

ಮೇಲೆ ತಿಳಿಸಲಾದ ಹುದ್ದೆಗಳ ಕ್ಷೇತ್ರಾಧಿಕಾರಿಗಳು ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆಯವರು ನಿಗದಿಪಡಿಸಿದ ಮಾರ್ಗಸೂಚನೆಗಳನ್ವಯ ಬಾಡಿಗೆ ಆಧಾರದ ಮೇಲೆ ವಾಹನಗಳನ್ನು ಪಡೆಯಬಹುದಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಬಿ. ಶಿವರಾಮಗೌಡ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಾರ್ಮಿಕ ಇಲಾಖೆ (ಕಾರ್ಖಾನೆಗಳು ಮತ್ತು ಬಾಯ್ಲರುಗಳು)

**P.R. 476**
**SC - 125**

## ಹಿಂದುಳಿದ ವರ್ಗಗಳ ಕಲ್ಯಾಣ ಸಚಿವಾಲಯ

### ತಿದ್ದುಪಡಿ

### ಸಂಖ್ಯೆ: ಬಿಸಿಡಬ್ಲ್ಯೂ 336 ಬಿಎಂಎಸ್ 2012, ಬೆಂಗಳೂರು, ದಿನಾಂಕ: 16–03–2013

"ಸರ್ಕಾರಿ ಆದೇಶ ಸಂಖ್ಯೆ ಹಿಂವಕ 336 ಬಿಎಂಎಸ್ 2012, ದಿನಾಂಕ: 13–12–2012ರ ಅನುಬಂಧದ ಕಾಲಂ ನಂ. (3) ಕ್ರಮಸಂಖ್ಯೆ: (28)ರಲ್ಲಿಯ ರಾಮದುರ್ಗ ವೃತ್ತಿಪರ ಎಂಬುದರ ಬದಲಾಗಿ ರಾಮದುರ್ಗ ಸಾಮಾನ್ಯ ಎಂತಲೂ ಹಾಗೂ ಕಲಂ ನಂ. (5)ರಲ್ಲಿಯ ಮಹಿಳೆ ಎಂಬುದರ ಬದಲಾಗಿ ಪುರುಷ ಎಂದು ತಿದ್ದುಪಡಿ ಮಾಡಲಾಗಿದ್ದು, ಅದರಂತೆ ಓದಿಕೊಳ್ಳತಕ್ಕದ್ದು."

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ. ಜಿ. ಮುಳಕೂರ,**
ಸರ್ಕಾರದ ಅಧೀನ ಕಾರ್ಯದರ್ಶಿ–2,
ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ

**P.R. 477**

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

### ತಿದ್ದುಪಡಿ

### ಸಂಖ್ಯೆ: ಆಕುಕ 63 ಪಿಐಎಂ 2012, ಬೆಂಗಳೂರು, ದಿನಾಂಕ: 16–02–2013

**1.** ಆಯುಷ್ ಇಲಾಖೆಯ ವೈದ್ಯರುಗಳಿಗೆ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ವೈದ್ಯರುಗಳಿಗೆ ನೀಡುತ್ತಿರುವ ಸವಲತ್ತುಗಳನ್ನು ವಿಸ್ತರಿಸಿ ಹೊರಡಿಸಿದ ಸರ್ಕಾರಿ ಆದೇಶ ಸಂಖ್ಯೆ ಆಕುಕ 357 ಪಿಐಎಂ 2012, ದಿನಾಂಕ: 24–01–2013ರ ಆದೇಶ ಭಾಗದ 2ನೇ ಸಾಲಿನಲ್ಲಿ "ವೈದ್ಯರು ದರ್ಜೆ–2 ವೃಂದದ ಹುದ್ದೆಯನ್ನು ಗ್ರೂಪ್–ಬಿ ವೃಂದದಿಂದ ಗ್ರೂಪ್–ಎ ವೃಂದಕ್ಕೆ" ಎಂಬ ಪದದ ನಂತರ, **"ಹಾಗೂ ವೈದ್ಯರು ದರ್ಜೆ–1 ವೃಂದದ ಹುದ್ದೆಯನ್ನು ಗ್ರೂಪ್–ಎ ವೃಂದದಿಂದ ಹಿರಿಯ ವೈದ್ಯಾಧಿಕಾರಿ (ಆಯುಷ್) ವೃಂದಕ್ಕೆ"** ಎಂಬುದನ್ನು ಸೇರಿಸಿ ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಹಾಗೂ ಸದರಿ ಆದೇಶದ, ಆದೇಶ ಭಾಗದಲ್ಲಿನ **2ನೇ ಕಂಡಿಕೆ ಹಾಗೂ ಅದರಲ್ಲಿನ "ಅ,ಆ,ಇ ಮತ್ತು ಈ"** ಬದಲಾಗಿ ಈ ಕೆಳಕಂಡಂತೆ ತಿದ್ದಿಕೊಂಡು ಓದಿಕೊಳ್ಳತಕ್ಕದ್ದು.

"ಹಾಗೂ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ವೈದ್ಯರುಗಳಿಗೆ ನೀಡಲಾಗುತ್ತಿರುವ 6,13 ಮತ್ತು 20 ವರ್ಷಗಳ ಕಾಲಬದ್ಧ ಮುಂಬಡ್ತಿ ವೇತನಗಳನ್ನು ಆಯುಷ್ ವೈದ್ಯರುಗಳಿಗೂ ವಿಸ್ತರಿಸಿ, ದಿನಾಂಕ: 10–01–2013ರಿಂದ ಜಾರಿಗೆ ಬರುವಂತೆ ಈ ಕೆಳಗಿನಂತೆ ನಿಗದಿಪಡಿಸಿದೆ.

ಅ) **ವೈದ್ಯಾಧಿಕಾರಿಗಳು (ಆಯುಷ್)**:–ವೈದ್ಯಾಧಿಕಾರಿಗಳು (ಆಯುಷ್) ಎಂದು ಪದನಾಮಗೊಂಡಿರುವ ವೈದ್ಯರುಗಳು ಸದರಿ ಹುದ್ದೆಯಲ್ಲಿ 6 ವರ್ಷದವರೆಗೆ ರೂ. 28,100–50,100 ವೇತನ ಶ್ರೇಣಿಯಲ್ಲಿ ಮುಂದುವರೆಯುವುದು.

ಆ) **ಹಿರಿಯ ವೈದ್ಯಾಧಿಕಾರಿಗಳು (ಆಯುಷ್):–** ವೈದ್ಯಾಧಿಕಾರಿಗಳು (ಆಯುಷ್) ವೃಂದದಲ್ಲಿ ಸತತ 6 ವರ್ಷಗಳ ಸೇವೆಯನ್ನು ಪೂರ್ಣಗೊಳಿಸಿದ ನಂತರ, ಇವರನ್ನು ಹಿರಿಯ ವೈದ್ಯಾಧಿಕಾರಿಗಳು, (ಆಯುಷ್) ಎಂದು ಪರಿಗಣಿಸಿ, ಅವರುಗಳಿಗೆ ರೂ. 30,400–51,300 ವೇತನ ಶ್ರೇಣಿಯನ್ನು ನಿಗದಿಪಡಿಸುವುದು.

ಇ) **ಉಪ ನಿರ್ದೇಶಕರು :–**ವೈದ್ಯಾಧಿಕಾರಿಗಳು (ಆಯುಷ್) ವೃಂದದಲ್ಲಿ ಸತತ 13 ವರ್ಷಗಳ ಸೇವೆಯನ್ನು ಪೂರ್ಣಗೊಳಿಸಿದ ನಂತರ ಇವರನ್ನು ಉಪ ನಿರ್ದೇಶಕರು, (ಆಯುಷ್) ಎಂದು ಪರಿಗಣಿಸಿ ಅವರುಗಳಿಗೆ ರೂ. 36,300–53,850 ವೇತನ ಶ್ರೇಣಿಯನ್ನು ನಿಗದಿಪಡಿಸುವುದು.

ಈ) ಆಯುಷ್ ಇಲಾಖೆಯಲ್ಲಿ ವೈದ್ಯಾಧಿಕಾರಿಗಳು (ಆಯುಷ್) ವೃಂದದಲ್ಲಿ ಸರರ 20 ವರ್ಷಗಳ ಸೇವೆ ಪೂರ್ಣಗೊಳಿಸಿದ ನಂತರ ಇವರನ್ನು ಉಪ ನಿರ್ದೇಶಕರು (ಆಯ್ಕೆ ಶ್ರೇಣಿ) ಎಂದು ಪರಿಗಣಿಸಿ ರೂ. 38,100–55,200 ವೇತನ ಶ್ರೇಣಿ ನಿಗದಿಗೊಳಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎನ್. ಹರಿಣಿಯಮ್ಮ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಭಾರತೀಯ ವೈದ್ಯ ಪದ್ಧತಿ)

P.R. 478

SC - 100

## ಇಂಧನ ಸಚಿವಾಲಯ

**ವಿಷಯ :** ಕರ್ನಾಟಕದಲ್ಲಿ ಬೆಳಕು ಯೋಜನೆಯಡಿ ವಿಶೇಷ ಘಟಕ ಯೋಜನೆಗಾಗಿ ಸಹಾಯಧನ ಬಿಡುಗಡೆ ಮಾಡುವ ಬಗ್ಗೆ

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ: ಇಎನ್ 20 ಪಿಎಸ್ಆರ್ 2012, ದಿನಾಂಕ: 30–01–2013
2. ಸರ್ಕಾರಿ ಆದೇಶ ಸಂಖ್ಯೆ: ಇಎನ್ 20 ಪಿಎಸ್ಆರ್ 2012, ಬೆಂಗಳೂರು, ದಿನಾಂಕ: 07–03–2013
3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ಪತ್ರ ಸಂಖ್ಯೆ: ಕ್ರೆಡೆಲ್/07/ಬೆಳಕು ಯೋಜನಾ/2012:299, ದಿನಾಂಕ: 06–02–2013

**ಪ್ರಸ್ತಾವನೆ:**

1. ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದ ಪ್ರಕಾರ, ಸರ್ಕಾರವು ಬಡತನದ ರೇಖೆಗಳಿಗಿಂತ ಕೆಳಗಿರುವ ಸಾಮಾನ್ಯ ವರ್ಗದ, ಪರಿಶಿಷ್ಟ ಜಾತಿ, ಮತ್ತು ಪರಿಶಿಷ್ಟ ಪಂಗಡದವರಿಗೆ ನ್ಯಾಯ ಬೆಲೆ ಅಂಗಡಿಗಳ ಮೂಲಕ ಎರಡು (2) ಸಿಎಫ್ಎಲ್ ಲ್ಯಾಂಪ್‌ಗಳನ್ನು 10.50 ಲಕ್ಷ ಫಲಾನುಭವಿಗಳಿಗೆ 2012–13ನೇ ಸಾಲಿನಲ್ಲಿ ನೀಡಲು ಬೆಳಕು ಯೋಜನೆಗೆ ಅನುಮೋದನೆ ನೀಡಿದೆ.
2. ಬೆಳಕು ಯೋಜನೆಯ ಸಿಎಫ್ಎಲ್ ಲ್ಯಾಂಪ್‌ಗಳನ್ನು ನ್ಯಾಯ ಬೆಲೆ ಅಂಗಡಿಗಳ ಮೂಲಕ ವಿತರಿಸಲು ಆಹಾರ ಮತ್ತು ನಾಗರೀಕ ಸರಬರಾಜು ಮತ್ತು ಗ್ರಾಹಕ ಇಲಾಖೆ, ತಮ್ಮ ಪತ್ರ ಸಂಖ್ಯೆ ಅನಾಸ 48 ಅನಾಸ 2012, ದಿನಾಂಕ: 21–12–2012ರಲ್ಲಿ ಸಹಮತಿಯನ್ನು ನೀಡಿರುತ್ತದೆ.
3. ಮೇಲೆ ಓದಲಾದ (3)ರ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತರವರು ಪ್ರಸಕ್ತ ಸಾಲಿನಲ್ಲಿ ಸದರಿ ಯೋಜನೆಗೆ ಒದಗಿಸಲಾದ ಅನುದಾನ ಬಿಡುಗಡೆ ಕೋರಿ ಸಲ್ಲಿಸಿದ ಪ್ರಸ್ತಾವನೆಯನ್ನು ಸರ್ಕಾರದ ಮಟ್ಟದಲ್ಲಿ ಹಣ ಬಿಡುಗಡೆ ಮಾಡಲು ಪ್ರಸ್ತುತ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 20 ಪಿಎಸ್ಆರ್ 2012, ಬೆಂಗಳೂರು, ದಿನಾಂಕ: 23ನೇ ಮಾರ್ಚ್, 2013**

1. ಕರ್ನಾಟಕ ನವೀಕರಿಸಬಹುದಾದ ಇಂಧಣ ಅಭಿವೃದ್ಧಿ ನಿಯಮಿತಕ್ಕೆ ಬೆಳಕು ಯೋಜನೆಯಡಿ ಎರಡು (2) ಸಿಎಫ್ಎಲ್ ಲ್ಯಾಂಪುಗಳನ್ನು ಬಡತನ ರೇಖೆಗಿಂತ ಕೆಳಗಿರುವ ಪರಿಶಿಷ್ಟ ಜಾತಿಯ ಫಲಾನುಭವಿಗಳಿಗೆ ಆಹಾರ ಮತ್ತು ನಾಗರೀಕ ಸರಬರಾಜು ಮತ್ತು ಗ್ರಾಹಕ ಇಲಾಖೆಯ ನ್ಯಾಯ ಬೆಲೆ ಅಂಗಡಿಗಳ ಮೂಲಕ ವಿತರಣೆ ಮಾಡಲು 2012–13ನೇ ಸಾಲಿಗೆ ರೂ. 2.00 ಕೋಟಿಗಳನ್ನು (ರೂ. ಎರಡು ಕೋಟಿಗಳನ್ನು) ಬಿಡುಗಡೆ ಮಾಡಿ ಆದೇಶಿಸಿದೆ.
2. ಈ ಮೊತ್ತವನ್ನು ಲೆಕ್ಕಶೀರ್ಷಿಕೆ "4801–80–190–0–03–422" ಬೆಳಕು ಯೋಜನೆಯ ವಿಶೇಷ ಘಟಕ ಯೋಜನೆಯಡಿ ಭರಿಸತಕ್ಕದ್ದು. ಈಗಾಗಲೇ ದಿನಾಂಕ: 30–01–2013ರ ಆದೇಶದಲ್ಲಿ ನಿಗದಿಪಡಿಸಿರುವ ನಿಬಂಧನೆಗಳ ಪ್ರಕಾರ ಯೋಜನೆಯನ್ನು ಅನುಷ್ಠಾನಗೊಳಿಸತಕ್ಕದ್ದು.
3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಸರ್ಕಾರದ ಉಪ ಕಾರ್ಯದರ್ಶಿ, ಇಂಧನ ಇಲಾಖೆಯವರ ಮೇಲು ರುಜುವನ್ನು ಸ್ವೀಕೃತಿ ರಸೀದಿಯಲ್ಲಿ ಪಡೆದು ಹಣವನ್ನು ಪಡೆಯತಕ್ಕದ್ದು.
4. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಬಿಡುಗಡೆ ಮಾಡಿರುವ ಅನುದಾನದ ಬಳಕೆಯ ಬಗ್ಗೆ ದೃಢೀಕರಣ ಪತ್ರ (Utilisation Certificate)ನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.
5. ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: FD 366 Exp-1/13, ದಿನಾಂಕ: 21–03–2013ರ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎ. ಚಪ್ಪರಬಂದ್,**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ

P.R. 479

## ಇಂಧನ ಸಚಿವಾಲಯ

**ವಿಷಯ :** ವಿತರಣಾ ಕಂಪನಿಗಳಿಗೆ ವಿದ್ಯುತ್ ಮರು ಹಂಚಿಕೆ ಮಾಡುವ ಬಗ್ಗೆ

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ: ಇಎನ್ 126 ಇಎಂಸಿ 2010, ದಿನಾಂಕ: 12–10–2011
2. ಸರ್ಕಾರಿ ಆದೇಶ ಸಂಖ್ಯೆ: ಇಎನ್ 81 ಇಎಂಸಿ 2011, ದಿನಾಂಕ: 03–11–2011
3. ಸರ್ಕಾರಿ ಆದೇಶ ಸಂಖ್ಯೆ: ಇಎನ್ 126 ಇಎಂಸಿ 2011, ದಿನಾಂಕ: 04–01–2012
4. ಸರ್ಕಾರಿ ಆದೇಶ ಸಂಖ್ಯೆ: ಇಎನ್ 81 ವಿಎಸ್‌ಸಿ 2011, ದಿನಾಂಕ: 11–01–2012
5. ಸರ್ಕಾರಿ ಆದೇಶ ಸಂಖ್ಯೆ: ಇಎನ್ 16 ಪಿಎಸ್‌ಆರ್ 2011, ದಿನಾಂಕ: 23–04–2012

**ಪ್ರಸ್ತಾವನೆ:**

1. ವಿವಿಧ ಉತ್ಪಾದನಾ ಮೂಲಗಳಿಂದ ಖರೀದಿಸುತ್ತಿರುವ ವಿದ್ಯುತ್ತನ್ನು ಸರ್ಕಾರದಿಂದ ಆಗಿಂದ್ದಾಗೆ ಹೊರಡಿಸಲಾಗುತ್ತಿರುವ ಆದೇಶಗಳ ಮೂಲಕ ರಾಜ್ಯದ ಎಲ್ಲಾ ವಿತರಣಾ ಕಂಪನಿಗಳಿಗೆ ಶೇಕಡಾವಾರು ಪ್ರಮಾಣದಲ್ಲಿ ಹಂಚಿಕೆ ಮಾಡಲಾಗುತ್ತಿದೆ. ರಾಜ್ಯದ ವಿವಿಧ ಭಾಗಗಳಲ್ಲಿರುವ ಗ್ರಾಹಕರ ಹಿತಾಸಕ್ತಿಯನ್ನು ದೃಷ್ಟಿಯಲ್ಲಿಟ್ಟುಕೊಂಡು ವಿವಿಧ ಮೂಲಗಳಿಂದ ಪಡೆಯುವ ವಿದ್ಯುತ್ತನ್ನು ಮರು ಹಂಚಿಕೆ ಮಾಡಲು ಪ್ರಸ್ತಾಪಿಸಿದೆ. ಆದ್ದರಿಂದ ಪ್ರಸ್ತುತ ಆದೇಶ.
2. ಈ ಆದೇಶದಲ್ಲಿ ಮರು ಹಂಚಿಕೆ ಮಾಡಲು ಪ್ರಸ್ತಾಪಿಸಿರುವ ವಿದ್ಯುತ್ ಪ್ರಮಾಣವು ವಿವಿಧ ವಿದ್ಯುತ್ ಸರಬರಾಜು ಕಂಪನಿಗಳ ಆರ್ಥಿಕ ಹೊರೆಯನ್ನು ಸರಿದೂಗಿಸುವ ಸಲುವಾಗಿ ಮತ್ತು ರಾಜ್ಯದ ವಿವಿಧ ಭಾಗಗಳಲ್ಲಿರುವ ಗ್ರಾಹಕರ ಹಿತಾಸಕ್ತಿಯನ್ನು ಕಾಪಾಡುವ ದೃಷ್ಟಿಯಿಂದಾಗಿದೆ.
3. ಈ ಆದೇಶದಲ್ಲಿ ಮರು ಹಂಚಿಕೆ ಮಾಡಲು ಉದ್ದೇಶಿಸಿರುವ ವಿದ್ಯುತ್ ಪ್ರಮಾಣವನ್ನು 2013–14ನೇ ಸಾಲಿಗೆ ಅನ್ವಯಿಸುತ್ತದೆ. ಈ ಪ್ರಸ್ತಾಪಿತ ಆದೇಶವು ವಿಸಕಂಗಳು ವಿದ್ಯುತ್ ಖರೀದಿ ವೆಚ್ಚ ಪಾವತಿಸುವ/ಭರಿಸುವ ಉದ್ದೇಶದಿಂದ ನೀಡಲಾಗುತ್ತಿದ್ದು, ಇದು ಮುಂದೆ ಪುನರ್ ಪರಿಶೀಲಿಸುವವರೆಗೆ ಜಾರಿಯಲ್ಲಿರುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 11 ಪಿಎಸ್‌ಆರ್ 2013, ಬೆಂಗಳೂರು, ದಿನಾಂಕ: 22ನೇ ಮಾರ್ಚ್, 2013**

1. ರಾಜ್ಯ ಸರ್ಕಾರವು ವಿವಿಧ ಮೂಲಗಳಿಂದ ದೊರಕುವ ವಿದ್ಯುತ್ತನ್ನು ಶೇಕಡಾವಾರು ಪ್ರಮಾಣದಲ್ಲಿ ರಾಜ್ಯದ ವಿತರಣಾ ಕಂಪನಿಗಳಿಗೆ ಈ ಕೆಳಕಂಡಂತೆ ಹಂಚಿಕೆ ಮಾಡಿ ಆದೇಶಿಸಿದೆ.

| ಮೂಲಗಳು | ಬೆವಿಕಂ | ಮವಿಕಂ | ಹುವಿಕಂ | ಗುವಿಕಂ | ಚಾವಿಸನಿನಿ | ಮೊತ್ತ |
|---|---|---|---|---|---|---|
| ಕೆಪಿಟಿಸಿಎಲ್, ಜುರಾಲಾ ಮತ್ತು ಟಿಬಿ ಡ್ಯಾಮ್ ಜಲವಿದ್ಯುತ್ | 31.91 | 8.53 | 17.60 | 26.51 | 15.45 | 100.00 |
| ಕೆಪಿಸಿಎಲ್ ಶಾಖೋತ್ಪನ್ನ ವಿದ್ಯುತ್ | 50.44 | 8.34 | 18.13 | 12.53 | 10.56 | 100.00 |
| ಕೇಂದ್ರ ವಿದ್ಯುತ್ ಉತ್ಪಾದನಾ ಘಟಕಗಳು | 50.44 | 8.34 | 18.13 | 12.53 | 10.56 | 100.00 |
| ಪ್ರಮುಖ ಸ್ವತಂತ್ರ ವಿದ್ಯುತ್ ಉತ್ಪಾದಕರು | 60.95 | 6.59 | 22.32 | 4.26 | 5.88 | 100.00 |
| ಅಲ್ಪಾವಧಿ/ಮಧ್ಯಮಾವಧಿ ಮೂಲಗಳ (ಒಪ್ಪಂದವಿರುವ) | 70.64 | 0 | 29.36 | 0 | 0 | 100.00 |
| ಅಲ್ಪಾವಧಿ/ಮಧ್ಯಮಾವಧಿ ಮೂಲಗಳ (ಒಪ್ಪಂದ ಮಾಡಿಕೊಳ್ಳಲಿರುವ) | 70.62 | 0 | 29.36 | 0 | 0.02 | 100.00 |

2. ಈ ಆದೇಶವು ವಿಸಕಂಗಳು ವಿದ್ಯುತ್ ಖರೀದಿ ವೆಚ್ಚ ಪಾವತಿಸುವ/ಭರಿಸುವ ಉದ್ದೇಶದಿಂದ ನೀಡಲಾಗುತ್ತಿದ್ದು, ಇದು ಮುಂದೆ ಪುನರ್ ಪರಿಶೀಲಿಸುವವರೆಗೆ ಜಾರಿಯಲ್ಲಿರುತ್ತದೆ. ಈ ಹಂಚಿಕೆಯು ಕೆಳಕಂಡ ನಿಬಂಧನೆಗಳಿಗೆ ಒಳಪಟ್ಟಿರುತ್ತದೆ.

**ನಿಬಂಧನೆಗಳು :**

1. ಈ ಅದೇಶವು ದಿನಾಂಕ: 01–04–2013ರಿಂದ ಜಾರಿಗೆ ಬರುತ್ತದೆ.
2. ಮುಂಬರುವ ಎಲ್ಲಾ ಹೊಸ ದೀರ್ಘಾವಧಿ ವಿದ್ಯುತ್ ಖರೀದಿಗಳಿಗೆ ಪ್ರತ್ಯೇಕವಾಗಿ ಹಂಚಿಕೆ ಆದೇಶ ಮಾಡಲಾಗುವುದು.
3. ಈ ಶೇಕಡಾವಾರು ಹಂಚಿಕೆ ಪ್ರಮಾಣವು ಅಸಂಪ್ರದಾಯಿಕ ಇಂಧನ ಮೂಲಗಳ ವಿದ್ಯುತ್ ಖರೀದಿಗೆ ಅನ್ವಯಿಸುವುದಿಲ್ಲ.
4. ಈ ಶೇಕಡಾವಾರು ಹಂಚಿಕೆ ಪ್ರಮಾಣವನ್ನು ವಿತರಣಾ ಕಂಪನಿಗಳು ವಿದ್ಯುತ್ ಖರೀದಿ ಒಪ್ಪಂದ (PPA) ದ ಮೂಲಕ ಇತರೆ ಮೂಲಗಳಿಂದ ಖರೀದಿಸಿ ಪ್ರತ್ಯೇಕವಾಗಿ ಹಣ ಪಾವತಿ ಮಾಡುತ್ತಿರುವ ವಿದ್ಯುತ್ ಪ್ರಮಾಣವನ್ನು ಹೊರತುಪಡಿಸಿ ನಿಗದಿಪಡಿಸಲಾಗಿದೆ.
5. ಈ ಶೇಕಡಾವಾರು ಹಂಚಿಕೆಯು ವಿತರಣಾ ಕಂಪನಿಗಳು ಬಳಕೆ ಮಾಡದಿರುವ Wheeled Energy ಗೆ ಅನ್ವಯಿಸುವುದಿಲ್ಲ.
6. ಈ ಆದೇಶದಲ್ಲಿ ನಮೂದಿಸಿರುವ ಮೂಲವಾರು ವಿದ್ಯುತ್ ಹಂಚಿಕೆ ಪ್ರಮಾಣವು ವಿದ್ಯುತ್ ಖರೀದಿ ವೆಚ್ಚ ಭರಿಸುವ ವಿಚಾರಕ್ಕೆ ಮಾತ್ರ ಅನ್ವಯಿಸುತ್ತದೆ. **ದಿನಾಂಕ 11–01–2012ರ ಆದೇಶದಲ್ಲಿ ಹಂಚಿಕೆಯಾಗಿರುವ ವಿಸಕಂವಾರು ವಿದ್ಯುತ್ ಹಂಚಿಕೆ ಪ್ರಮಾಣವನ್ನು ದೈನಂದಿನ ವಿದ್ಯುತ್ ಲಭ್ಯತೆ ಮತ್ತು ಪೂರೈಕೆಗೆ ಪರಿಗಣಿಸುವುದು.**
7. ವಿವಿಧ ವಿದ್ಯುತ್ ಮೂಲಗಳಿಂದ ಖರೀದಿಸುವ ವಿದ್ಯುತ್‌ನ ಶೇಕಡಾವಾರು ಹಂಚಿಕೆಯ ಪ್ರಮಾಣವು ಪ್ರತಿ ಉತ್ಪಾದನಾ ಘಟಕ/ಸ್ಥಾವರಗಳಿಂದ ಲಭ್ಯವಾಗುವ ವಿದ್ಯುತ್ತಿಗೆ ಅನ್ವಯಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎ. ಚಪ್ಪರಬಂದ್,**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ

P.R. 480

## ಇಂಧನ ಸಚಿವಾಲಯ

**ವಿಷಯ :** ಕರ್ನಾಟಕದಲ್ಲಿ ಬೆಳಕು ಯೋಜನೆಯಡಿ ಪರಿಶಿಷ್ಟ ಪಂಗಡದ ಉಪಯೋಜನೆಗಾಗಿ ಸಹಾಯಧನ ಬಿಡುಗಡೆ ಮಾಡುವ ಬಗ್ಗೆ

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ: ಇಎನ್ 20 ಪಿಎಸ್‌ಆರ್ 2012, ದಿನಾಂಕ: 30–01–2013
2. ಸರ್ಕಾರಿ ಆದೇಶ ಸಂಖ್ಯೆ: ಇಎನ್ 20 ಪಿಎಸ್‌ಆರ್ 2012, ಬೆಂಗಳೂರು, ದಿನಾಂಕ: 07–03–2013
3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ಪತ್ರ ಸಂಖ್ಯೆ: ಕ್ರೆಡೆಲ್/07/ಬೆಳಕು ಯೋಜನಾ/ 2012:299, ದಿನಾಂಕ: 06–02–2013

**ಪ್ರಸ್ತಾವನೆ:**

1. ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದ ಪ್ರಕಾರ, ಸರ್ಕಾರವು ಬಡತನದ ರೇಖೆಗಳಿಗಿಂತ ಕೆಳಗಿರುವ ಸಾಮಾನ್ಯ ವರ್ಗದ, ಪರಿಶಿಷ್ಟ ಜಾತಿ, ಮತ್ತು ಪರಿಶಿಷ್ಟ ಪಂಗಡದವರಿಗೆ ನ್ಯಾಯ ಬೆಲೆ ಅಂಗಡಿಗಳ ಮೂಲಕ ಎರಡು (2) ಸಿಎಫ್‌ಎಲ್ ಲ್ಯಾಂಪ್‌ಗಳನ್ನು 10.50 ಲಕ್ಷ ಫಲಾನುಭವಿಗಳಿಗೆ 2012–13ನೇ ಸಾಲಿನಲ್ಲಿ ನೀಡಲು ಬೆಳಕು ಯೋಜನೆಗೆ ಅನುಮೋದನೆ ನೀಡಿದೆ.
2. ಬೆಳಕು ಯೋಜನೆಯ ಸಿಎಫ್‌ಎಲ್ ಲ್ಯಾಂಪ್‌ಗಳನ್ನು ನ್ಯಾಯ ಬೆಲೆ ಅಂಗಡಿಗಳ ಮೂಲಕ ವಿತರಿಸಲು ಆಹಾರ ಮತ್ತು ನಾಗರೀಕ ಸರಬರಾಜು ಮತ್ತು ಗ್ರಾಹಕ ಇಲಾಖೆ, ತಮ್ಮ ಪತ್ರ ಸಂಖ್ಯೆ ಅನಾಸ 48 ಅನಾಸ 2012, ದಿನಾಂಕ: 21–12–2012ರಲ್ಲಿ ಸಹಮತಿಯನ್ನು ನೀಡಿರುತ್ತದೆ.
3. ಮೇಲೆ ಓದಲಾದ (3)ರ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದವರು ಪ್ರಸಕ್ತ ಸಾಲಿನಲ್ಲಿ ಸದರಿ ಯೋಜನೆಗೆ ಒದಗಿಸಲಾದ ಅನುದಾನ ಬಿಡುಗಡೆ ಕೋರಿ ಸಲ್ಲಿಸಿದ ಪ್ರಸ್ತಾವನೆಯನ್ನು ಸರ್ಕಾರದ ಮಟ್ಟದಲ್ಲಿ ಹಣ ಬಿಡುಗಡೆ ಮಾಡಲು ಪ್ರಸ್ತುತ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 20 ಪಿಎಸ್‌ಆರ್ 2012, ಬೆಂಗಳೂರು, ದಿನಾಂಕ: 23ನೇ ಮಾರ್ಚ್, 2013**

1. ಕರ್ನಾಟಕ ನವೀಕರಿಸಬಹುದಾದ ಇಂಧಣ ಅಭಿವೃದ್ಧಿ ನಿಯಮಿತಕ್ಕೆ ಬೆಳಕು ಯೋಜನೆಯಡಿ ಎರಡು (2) ಸಿಎಫ್‌ಎಲ್ ಲ್ಯಾಂಪುಗಳನ್ನು ಬಡತನ ರೇಖೆಗಿಂತ ಕೆಳಗಿರುವ ಪರಿಶಿಷ್ಟ ಪಂಗಡದ ಫಲಾನುಭವಿಗಳಿಗೆ ಆಹಾರ ಮತ್ತು ನಾಗರೀಕ ಸರಬರಾಜು ಮತ್ತು ಗ್ರಾಹಕ ಇಲಾಖೆಯ ನ್ಯಾಯ ಬೆಲೆ ಅಂಗಡಿಗಳ ಮೂಲಕ ವಿತರಣೆ ಮಾಡಲು 2012–13ನೇ ಸಾಲಿಗೆ ರೂ. 3.00 ಕೋಟಿಗಳನ್ನು (ರೂ. ಮೂರು ಕೋಟಿಗಳನ್ನು) ಬಿಡುಗಡೆ ಮಾಡಿ ಆದೇಶಿಸಿದೆ.
2. ಈ ಮೊತ್ತವನ್ನು ಲೆಕ್ಕಶೀರ್ಷಿಕೆ "4801–80–190–0–03–423" ಬೆಳಕು ಯೋಜನೆಯ ವಿಶೇಷ ಘಟಕ ಯೋಜನೆಯ ಗಿರಿಜನ ಉಪಯೋಜನೆಯಡಿ ಭರಿಸತಕ್ಕದ್ದು. ಈಗಾಗಲೇ ದಿನಾಂಕ: 30–01–2013ರ ಆದೇಶದಲ್ಲಿ ನಿಗದಿಪಡಿಸಿರುವ ನಿಬಂಧನೆಗಳ ಪ್ರಕಾರ ಯೋಜನೆಯನ್ನು ಅನುಷ್ಠಾನಗೊಳಿಸತಕ್ಕದ್ದು.
3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಸರ್ಕಾರದ ಉಪ ಕಾರ್ಯದರ್ಶಿ, ಇಂಧನ ಇಲಾಖೆಯವರ ಮೇಲು ರುಜುವನ್ನು ಸ್ವೀಕೃತಿ ರಸೀದಿಯಲ್ಲಿ ಪಡೆದು ಹಣವನ್ನು ಪಡೆಯತಕ್ಕದ್ದು.
4. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಬಿಡುಗಡೆ ಮಾಡಿರುವ ಅನುದಾನದ ಬಳಕೆಯ ಬಗ್ಗೆ ದೃಢೀಕರಣ ಪತ್ರ (Utilisation Certificate)ನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.
5. ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: FD 366 Exp-1/13, ದಿನಾಂಕ: 21–03–2013ರ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎ. ಚಪ್ಪರಬಂದ್,**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ

P.R. 481

## ತೋಟಗಾರಿಕೆ ಸಚಿವಾಲಯ

**ವಿಷಯ :** ಜೂಟು ರೇಷ್ಮೆ ಗಿರಣಿ, ಚನ್ನಪಟ್ಟಣದ ಆವರಣದಲ್ಲಿ ಸಾಫ್ಟ್ ಸಿಲ್ಕ್ ಬಟ್ಟೆಗಳನ್ನು ತಯಾರು ಮಾಡುವುದಕ್ಕಾಗಿ ನೇಯ್ಗೆ ಉತ್ಪಾದನಾ ಘಟಕವನ್ನು ಪ್ರಾರಂಭಿಸುವ ಬಗ್ಗೆ

**ಓದಲಾಗಿದೆ :** ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರೇಷ್ಮೆ ಉದ್ಯಮಗಳ ನಿಗಮ ನಿಯಮಿತ ಇವರ ಪತ್ರ ಸಂಖ್ಯೆ: KSIC/M.D's-EST/SSM/Project/2011-12,1471, ದಿನಾಂಕ: 08–12–2011, ಮತ್ತು ಪತ್ರ ಸಂಖ್ಯೆ: ಕೆಎಸ್‌ಐಸಿ/ ಎಂಕೆಟಿಜಿ/ಎಸ್‌ಎಸ್‌ಎಫ್–ಸಿಪಿಟಿ/2012–13, ದಿನಾಂಕ: 04–02–2013

**ಪ್ರಸ್ತಾವನೆ:**

2012–13ನೇ ಸಾಲಿನ ಆಯವ್ಯಯ ಕೃಷಿ ಭಾಷಣದ ಕಂಡಿಕೆ–66 ರಲ್ಲಿ ರೇಷ್ಮೆ ಇಲಾಖೆಯ ವ್ಯಾಪ್ತಿಗೆ ಬರುವ ಕರ್ನಾಟಕ ರೇಷ್ಮೆ ಉದ್ಯಮಗಳ ನಿಗಮ ನಿಯಮಿತಕ್ಕೆ ಸಂಬಂಧಿಸಿದಂತೆ ಮಾನ್ಯ ಮುಖ್ಯಮಂತ್ರಿಗಳು ಈ ಕೆಳಕಂಡಂತೆ ಘೋಷಿಸಿರುತ್ತಾರೆ.

**66. ಹಳೇ ನೇಯ್ದೆ ಕಾರ್ಖಾನೆಗಳ ಪುನರ್‌ಜ್ಜೀವನ:** ಮೈಸೂರಿನಲ್ಲಿರುವ ರೇಷ್ಮೆ ನೇಯ್ಗೆ ಕಾರ್ಖಾನೆ, 2012ನೇ ಸಾಲಿನಲ್ಲಿ 100 ವರ್ಷಗಳನ್ನು ಪೂರೈಸುತ್ತಿದೆ. ಸಂಸ್ಥೆಯ ನೌಕರರಿಗೆ ಪ್ರೋತ್ಸಾಹ ಧನ, ಕಾರ್ಖಾನೆ ಉತ್ಪನ್ನಗಳ ಪ್ರಚಾರ, ಕಿರುಚಿತ್ರ

ತಯಾರಿಕೆ, ಸಾಂಸ್ಕೃತಿಕ ಕಾರ್ಯಕ್ರಮಗಳಿಗೆ 5 ಕೋಟಿ ರೂ. ಮತ್ತು ಚನ್ನಪಟ್ಟಣದಲ್ಲಿರುವ ನೇಯ್ಗೆ ಘಟಕವನ್ನು ಪುನರುಜ್ಜೀವನಗೊಳಿಸಲು, ಸಾರ್ವಜನಿಕ ಪರಿಣಿತ ಸಂಸ್ಥೆಗಳ ಸಹಭಾಗಿತ್ವದಲ್ಲಿ ಹೊಸ ನೇಯ್ಗೆ ಘಟಕ ಸ್ಥಾಪನೆ ಹಾಗೂ ಇತರೆ ಮೂಲಭೂತ ಸೌಕರ್ಯಗಳ ಅಳವಡಿಕೆಗಾಗಿ 6 ಕೋಟಿ ರೂ. ನೀಡಲಾಗುವುದು.

ಮೇಲೆ ಓದಲಾದ ಪತ್ರಗಳಲ್ಲಿ ಸರ್ಕಾರವು ಜೂಟು ರೇಷ್ಮೆ ಗಿರಣಿಯನ್ನು ಪುನಶ್ಚೇತನಗೊಳಿಸಲು ಹಲವಾರು ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದ್ದರೂ, ಈ ಕೆಲಸವು ಹಲವಾರು ಕಾರಣಗಳಿಂದ ಫಲಕಾರಿಯಾಗಿರುವುದಿಲ್ಲ. ಹಾಗಾಗಿ, ಸದರಿ ಗಿರಣಿಯಲ್ಲಿ ಪುನಃ ಕಚ್ಚಾ ಜೂಟು ರೇಷ್ಮೆಯನ್ನು ಬಳಸಿ ಸ್ಪನ್ ಸಿಲ್ಕ್ ದಾರವನ್ನು ಉತ್ಪಾದಿಸುವ ಬದಲು ಇದಕ್ಕೆ ಪರ್ಯಾಯವಾಗಿ ಬೇರೆ ಉತ್ಪಾದನಾ ಚಟುವಟಿಕೆಗಳನ್ನು ಮಾಡಬೇಕಾಗಿರುತ್ತದೆ. ಚನ್ನಪಟ್ಟಣ ನಗರದ ಹೃದಯ ಭಾಗದಲ್ಲಿ ಈ ಗಿರಣಿಗೆ ಸೇರಿದ 20 ಎಕರೆ ಜಮೀನು ಇರುತ್ತದೆ. ಈ ಘಟಕವು ಹಲವಾರು ಕಾರಣಗಳಿಂದ 2004ರಿಂದ ಮುಚ್ಚಿ ಅಲ್ಲಿ ಕೆಲಸ ನಿರ್ವಹಿಸುತ್ತಿದ್ದ ಎಲ್ಲಾ ನೌಕರರುಗಳಿಗೆ ಸ್ವಯಂ ನಿವೃತ್ತಿ ನೀಡಲಾಗಿರುತ್ತದೆ. ಪ್ರಸ್ತುತ ಈ ಸ್ಥಳವನ್ನು ಕೈಗಾರಿಕಾ ವಲಯವನ್ನಾಗಿ ಮಾಡಲು ಉದ್ದೇಶಿಸಿದ್ದು, ಸದರಿ ಸ್ಥಳದಲ್ಲಿ ಸಾಫ್ಟ್ ಸಿಲ್ಕ್ ಬಟ್ಟೆಯನ್ನು ತಯಾರು ಮಾಡುವ ಉದ್ದೇಶವನ್ನು ಕರ್ನಾಟಕ ರೇಷ್ಮೆ ಉದ್ಯಮಗಳ ನಿಗಮವು ಹೊಂದಿರುತ್ತದೆ. ನಿಗಮವು ಕೇವಲ ಮೈಸೂರು ಸಿಲ್ಕ್ ಜರಿ ಸೀರೆಗಳನ್ನು ಮತ್ತು ಕ್ರೇಪ್ ಸೀರೆಗಳನ್ನು ಮತ್ತು ಕ್ರೇಪ್ ಸಾದಾ ಬಟ್ಟೆಗಳನ್ನು ಮಾತ್ರ ಉತ್ಪಾದನೆ ಮಾಡುತ್ತಾ ಇದೆ. ನಿಗಮದ ಮಳಿಗೆಗಳಿಗೆ ಗ್ರಾಹಕರು ಭೇಟಿ ನೀಡಿದಾಗ ಸಾಮಾನ್ಯ ವರ್ಗದ ಜನರಿಗೆ ಕೈಗೆಟುಕುವ ದರದ ಸೀರೆಗಳು ಹಾಗೂ ಜುಬ್ಬ ಶರ್ಟ್ ಬಟ್ಟೆಗಳಿಗೆ ಬೇಕಾದ ಸಿಲ್ಕ್ ಬಟ್ಟೆ ದೊರೆಯುತ್ತಿಲ್ಲ. ಈ ಸಾಫ್ಟ್ ಸಿಲ್ಕ್ ಬಟ್ಟೆಗಳಿಗೆ ಬಹಳಷ್ಟು ಬೇಡಿಕೆ ಇದೆ. ಹಾಗಾಗಿ, ಈ ಸಾಫ್ಟ್ ಸಿಲ್ಕ್ ಬಟ್ಟೆಯನ್ನು ಸದರಿ ಗಿರಣಿಯಲ್ಲಿಯೇ ಮಗ್ಗಗಳನ್ನು ಹಾಕಿ ತಯಾರು ಮಾಡಿದಲ್ಲಿ ನಿಗಮದ ಮಾರಾಟ ವಹಿವಾಟು ಹೆಚ್ಚಾಗುವುದಲ್ಲದೇ ಸಾಮಾನ್ಯ ವರ್ಗದ ಜನರಿಗೂ ಸಹ ಸಿಲ್ಕ್ ಬಟ್ಟೆಗಳು ದೊರೆಯುವ ಅವಕಾಶವನ್ನು ಕಲ್ಪಿಸಿದಂತಾಗುತ್ತದಲ್ಲದೆ, ಪರೋಕ್ಷವಾಗಿ ಇದರಿಂದ ರೈತರ ಆರ್ಥಿಕ ಮಟ್ಟವನ್ನು ಸುಧಾರಿಸುವುದಕ್ಕೆ ಸಹಾಯ ಮಾಡಿದಂತಾಗುತ್ತದೆ. ಅಲ್ಲದೇ, ಸ್ಥಳೀಯರಿಗೂ ಸಹ ಉದ್ಯೋಗಾವಕಾಶಗಳನ್ನು ಸೃಷ್ಟಿಸಿದಂತೆಯೂ ಆಗುತ್ತದೆ. ಸಾಫ್ಟ್ ಸಿಲ್ಕ್ ಬಟ್ಟೆಗಳ ಬಗ್ಗೆ ಮಾರುಕಟ್ಟೆಯಲ್ಲಿ ಹೆಚ್ಚಿನ ಬೇಡಿಕೆ ಇದ್ದು, ನಿಗಮವು ಹೊಸದಾಗಿ ಮಾರಾಟ ಮಳಿಗೆಗಳನ್ನು ತೆರೆಯುತ್ತಿರುವುದರಿಂದ ರೇಷ್ಮೆ ನೇಯ್ಗೆ ಕಾರ್ಖಾನೆಯಲ್ಲಿ ಈಗ ಬರುತ್ತಿರುವ ಉತ್ಪಾದನೆಯು ಅಷ್ಟಾಗಿ ಸಾಕಾಗುವುದಿಲ್ಲ. ಹಾಗಾಗಿ ಈ ಘಟಕದಲ್ಲಿ ಹೆಚ್ಚಿನ ಉತ್ಪಾದನೆ ತೆಗೆಯುವ ಹಿನ್ನೆಲೆಯಲ್ಲಿ ಹೊಸದಾಗಿ ತಾಂತ್ರಿಕತೆಯಿಂದ ಕೂಡಿರುವ ಮಗ್ಗಗಳನ್ನು ಹಾಕುವ ಉದ್ದೇಶ ಹೊಂದಿರುವುದರಿಂದ ಉತ್ಪಾದನೆಯು ಗಣನೀಯವಾಗಿ ಹೆಚ್ಚಾಗಲಿದೆ. ಜೂಟು ರೇಷ್ಮೆ ಗಿರಣಿಯಲ್ಲಿ ಹೊಸದಾಗಿ ನೇಯ್ಗೆ ಘಟಕವನ್ನು ಪ್ರಾರಂಭಿಸುವುದರಿಂದ ಕರ್ನಾಟಕ ರೇಷ್ಮೆ ಉದ್ಯಮಗಳ ನಿಗಮ ನಿಯಮಿತಕ್ಕೆ ಯಾವುದೇ ನಷ್ಟ ಉಂಟಾಗುವುದಿಲ್ಲವೆಂದು ತಿಳಿಸಿರುತ್ತಾರೆ.

2012–13ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಘೋಷಿಸಿರುವಂತೆ ಜೂಟು ರೇಷ್ಮೆ ಗಿರಣಿ, ಚನ್ನಪಟ್ಟಣ ಆವರಣದಲ್ಲಿ ಸಾಫ್ಟ್ ಸಿಲ್ಕ್ ಬಟ್ಟೆಗಳನ್ನು ತಯಾರು ಮಾಡುವುದರ ಬಗ್ಗೆ ಶ್ರೀ ಪಿ.ಎನ್. ನರೇಶ್ ಕನ್ಸಲ್ಟೆಂಟ್ ಇವರಿಂದ ಪ್ರಾಜೆಕ್ಟ್ ರಿಪೋರ್ಟ್ ಪಡೆದು ಸದರಿ ಗಿರಣಿಯಲ್ಲಿ ನೇಯ್ಗೆ ಘಟಕವನ್ನು ಪ್ರಾರಂಭಿಸುವ ಬಗ್ಗೆ ದಿನಾಂಕ: 13–01–2011ರಂದು ನಡೆದ 161ನೇ ನಿರ್ದೇಶಕರ ಮಂಡಳಿಯ ಮುಂದೆ ಪ್ರಸ್ತಾವನೆ ಮಂಡಿಸಿ, ಪ್ರಸ್ತಾವನೆಗೆ ನಿರ್ದೇಶಕ ಮಂಡಳಿಯು ತಾತ್ವಿಕವಾಗಿ ಒಪ್ಪಿಕೊಂಡಿರುವುದಾಗಿ ಮತ್ತು ಸದರಿ ಗಿರಿಣಿಯಲ್ಲಿ ಪ್ರಾರಂಭಿಸಲು ಯೋಜಿಸಲಾಗಿರುವ ಈ ನೇಯ್ಗೆ ಘಟಕದಲ್ಲಿ ಕ್ರೇಪ್ ಸಿಲ್ಕ್ ಸೀರೆಗಳನ್ನು ತಯಾರು ಮಾಡುವುದಕ್ಕೆ ಕೆಲವು ಅಡಚಣೆಗಳಿದ್ದು, ಈಗಾಗಲೇ ರೇಷ್ಮೆ ನೇಯ್ಗೆ ಕಾರ್ಖಾನೆ, ಮೈಸೂರು ಇಲ್ಲಿ ತಯಾರಾಗುವ ಮೈಸೂರು ಕ್ರೇಪ್ ಸಿಲ್ಕ್ ಸೀರೆಗಳಿಗೆ ಭಾರತ ಸರ್ಕಾರದಿಂದ ಭೌಗೋಳಿಕ ಸಾಂಕೇತಿಕ ನೋಂದಣಿ ಪತ್ರವು "ಮೈಸೂರು ಸಿಲ್ಕ್" ದೊರೆತಿದ್ದು, ಈ ಬಟ್ಟೆಯನ್ನು ಮೈಸೂರು ಭಾಗದಲ್ಲಿ ಮಾತ್ರ ಉತ್ಪಾದಿಸಬೇಕಾಗಿರುತ್ತದೆ. ಹಾಗಾಗಿ ಈ ಕ್ರೇಪ್ ಸಿಲ್ಕ್ ಸೀರೆಗಳನ್ನು ಜೂಟು ರೇಷ್ಮೆ ಗಿರಣಿ, ಚನ್ನಪಟ್ಟಣ ಆವರಣದಲ್ಲಿ ತಯಾರು ಮಾಡಿದಲ್ಲಿ, ಸಂಸ್ಥೆಗೆ ನೀಡಲಾಗಿರುವ ಭೌಗೋಳಿಕ ಸಾಂಕೇತಿಕ ನೋಂದಣಿಗೆ ವಿರುದ್ಧವಾದಂತಾಗುತ್ತದೆಂದು, ಜೂಟು ರೇಷ್ಮೆ ಗಿರಣಿಯಲ್ಲಿ ಕ್ರೇಪ್ ಸೀರೆಗಳನ್ನು ತಯಾರು ಮಾಡುವ ಅಥವಾ ಉತ್ಪಾದಿಸುವ ಯೋಜನೆಯು ಸಾಧುವಾಗಿರುವುದಿಲ್ಲ. ಆದುದರಿಂದ ಜೂಟು ರೇಷ್ಮೆ ಗಿರಣಿ ಆವರಣದಲ್ಲಿ ಕ್ರೇಪ್/ಸಾಫ್ಟ್ ಸಿಲ್ಕ್ ಬಟ್ಟೆಗಳನ್ನು ತಯಾರು ಮಾಡುವುದಕ್ಕಾಗಿ ನೇಯ್ಗೆ ಉತ್ಪಾದನಾ ಘಟಕವನ್ನು ಪ್ರಾರಂಭಿಸುವ ಬದಲು ಸಾಫ್ಟ್ ಸಿಲ್ಕ್ ಬಟ್ಟೆಗಳನ್ನು ತಯಾರು ಮಾಡುವುದಕ್ಕಾಗಿ ನೇಯ್ಗೆ ಘಟಕವನ್ನು ರೂ. 6.00 ಕೋಟಿ ವೆಚ್ಚದಲ್ಲಿ ಪ್ರಾರಂಭಿಸುವ ಬಗ್ಗೆ ದಿನಾಂಕ: 28–06–2012ರಂದು ನಡೆದ 167ನೇ ನಿರ್ದೇಶಕರ ಮಂಡಳಿ ಸಭೆಯಲ್ಲಿ ಅನುಮೋದನೆ ನೀಡಿರುತ್ತದೆ ಎಂದು ಹಾಗೂ ಈ ಯೋಜನೆಗೆ ಸರ್ಕಾರದ ಅನುಮೋದನೆಯನ್ನು ನೀಡುವಂತೆ ಕರ್ನಾಟಕ ರೇಷ್ಮೆ ಉದ್ಯಮಗಳ ನಿಗಮ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದ್ದು, ಚನ್ನಪಟ್ಟಣದಲ್ಲಿರುವ ನೇಯ್ಗೆ ಘಟಕವನ್ನು ರೂ. 9.24 ಕೋಟಿಗಳ ವೆಚ್ಚದಲ್ಲಿ ಪುನರುಜ್ಜೀವನಗೊಳಿಸುವ ಯೋಜನೆಗೆ ಆಡಳಿತಾತ್ಮಕ ಅನುಮೋದನೆಯನ್ನು ಕೆಲವು ಷರತ್ತುಗಳ ಮೇಲೆ ನೀಡಲು, ಹೊಸ ಸಾಫ್ಟ್ ಸಿಲ್ಕ್ ನೇಯ್ಗೆ ಘಟಕ ಸ್ಥಾಪನೆ ಹಾಗೂ ಇತರೆ ಮೂಲಭೂತ ಸೌಕರ್ಯಗಳ ಅಳವಡಿಕೆಗಾಗಿ ಸರ್ಕಾರದಿಂದ ರೂ. 6.00 ಕೋಟಿಗಳನ್ನು ಹೆಚ್ಚುವರಿಯಾಗಿ ಒದಗಿಸಿಕೊಂಡು ನಂತರ ಬಿಡುಗಡೆ ಮಾಡಲು ಮತ್ತು ಚನ್ನಪಟ್ಟಣದ ರೇಷ್ಮೆ ಗಿರಣಿಯ ಆವರಣದಲ್ಲಿರುವ ಹಳೆಯ ಯಂತ್ರೋಪಕರಣಗಳನ್ನು ವಿಲೇ ಮಾಡಿ, ಅದರಿಂದ ಬಂದಂತಹ ರೂ. 3.24 ಕೋಟಿಗಳನ್ನು ಪ್ರಸ್ತಾಪಿತ ಉದ್ದೇಶಕ್ಕೆ ಬಳಸಲು ಸರ್ಕಾರ ನಿರ್ಧರಿಸುವ ಕಾರಣ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ತೋಇ 62 ರೇಉನಿ 2011, ಬೆಂಗಳೂರು, ದಿನಾಂಕ: 19ನೇ ಮಾರ್ಚ್, 2013**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳ ಹಿನ್ನೆಲೆಯಲ್ಲಿ, ಚನ್ನಪಟ್ಟಣದಲ್ಲಿರುವ ನೇಯ್ಗೆ ಘಟಕವನ್ನು ಈ ಕೆಳಕಂಡ ಷರತ್ತುಗಳ ಮೇಲೆ ರೂ. 9.24 ಕೋಟಿಗಳ (ರೂಪಾಯಿ ಒಂಬತ್ತು ಕೋಟಿ ಇಪ್ಪತ್ನಾಲ್ಕು ಲಕ್ಷ ರೂಪಾಯಿಗಳು ಮಾತ್ರ) ವೆಚ್ಚದಲ್ಲಿ ಪುನರುಜ್ಜೀವನಗೊಳಿಸುವ ಯೋಜನೆಗೆ ಆಡಳಿತಾತ್ಮಕ ಅನುಮೋದನೆಗೆ ಸರ್ಕಾರವು ಮಂಜೂರಾತಿ ನೀಡಿದೆ.

1. ಹೊಸ ಸಾಫ್ಟ್ ಸಿಲ್ಕ್ ನೇಯ್ಗೆ ಘಟಕ ಹಾಗೂ ಇತರೆ ಮೂಲಭೂತ ಸೌಕರ್ಯಗಳ ಅಳವಡಿಕೆಗಾಗಿ ಸರ್ಕಾರದಿಂದ ರೂ. 6.00 ಕೋಟಿಗಳನ್ನು ಹೆಚ್ಚುವರಿಯಾಗಿ ಒದಗಿಸಿಕೊಂಡು ನಂತರ ಬಿಡುಗಡೆ ಮಾಡಲು;
2. ಚನ್ನಪಟ್ಟಣದ ರೇಷ್ಮೆ ಗಿರಣಿಯ ಆವರಣದಲ್ಲಿರುವ ಹಳೆಯ ಯಂತ್ರೋಪಕರಣಗಳನ್ನು ವಿಲೇ ಮಾಡಿ, ಅದರಿಂದ ಬಂದಂತಹ ರೂ. 3.24 ಕೋಟಿಗಳನ್ನು ಪ್ರಸ್ತಾಪಿತ ಉದ್ದೇಶಕ್ಕೆ ಬಳಸಲು;
3. Company should bring out the strategy to utilize proposed installed capacity in the case where bulk orders from Indian Airlines etc., are not available.
4. Department/Corporation should not create new posts or hire new staff for this unit. Existing staff and additional (if required) outsourced staff should be used.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 388 ವೆಚ್ಚ–4/2012, ದಿನಾಂಕ: 15–09–2012 ಮತ್ತು ಎಫ್‌ಡಿ 388 ವೆಚ್ಚ–4/2012, ದಿನಾಂಕ: 27–01–2013ರ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಬಿ.ಎಸ್. ಚಂದ್ರಶೇಖರ್,**
ಪೀಠಾಧಿಕಾರಿ,
ತೋಟಗಾರಿಕೆ ಇಲಾಖೆ (ರೇಷ್ಮೆ)

**P.R. 482**

## ಇಂಧನ ಸಚಿವಾಲಯ

### ಅಧಿಸೂಚನೆ

### ಸಂಖ್ಯೆ: ಇಎನ್ 24 ಸಮನ್ವಯ 2013, ಬೆಂಗಳೂರು, ದಿನಾಂಕ: 28–03–2013.

ಸರ್ಕಾರದ ಅಧಿಸೂಚನೆ ಸಂಖ್ಯೆ : ಇಎನ್ 72 ಸಮನ್ವಯ 2012 ದಿನಾಂಕ 25–07–2012 ರಲ್ಲಿ ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ ನಿಯಮಿತ, ಬೆಂಗಳೂರು ಇದರ ಮೆಮೊರ್‍ಯಾಂಡಮ್ ಆಫ್ ಅಸೋಸಿಯೇಷನ್ ಮತ್ತು ಆರ್ಟಿಕಲ್ಸ್ ಆಫ್ ಅಸೋಸಿಯೇಷನ್‌ನ ಆರ್ಟಿಕಲ್ 74(ಎ) ಮತ್ತು (ಬಿ) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಮನೋಜ್ ಕುಮಾರ್ ಮೀನಾ, ಭಾ.ಆ.ಸೇ. ಇವರನ್ನು ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ ನಿಯಮಿತ, ಬೆಂಗಳೂರು ಇದರ ನಿರ್ದೇಶಕರ ಮಂಡಳಿಯ ನಿರ್ದೇಶಕರನ್ನಾಗಿ ನೇಮಕ ಮಾಡಿದ್ದನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಪಡಿಸಲಾಗಿದೆ.

ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ ನಿಯಮಿತ, ಬೆಂಗಳೂರು ಇದರ ಮೆಮೊರ್‍ಯಾಂಡಮ್ ಆಫ್ ಅಸೋಸಿಯೇಷನ್ ಮತ್ತು ಆರ್ಟಿಕಲ್ಸ್ ಆಫ್ ಅಸೋಸಿಯೇಷನ್‌ನ ಆರ್ಟಿಕಲ್ 74(ಎ) ಮತ್ತು (ಬಿ) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಬಿ.ಎಲ್. ಗುರುಪ್ರಸಾದ್, ಐ.ಆರ್.ಎಸ್., ನಿರ್ದೇಶಕರು (ಹಣಕಾಸು), ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ ನಿಯಮಿತ ಇವರನ್ನು ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ ನಿಯಮಿತದ ನಿರ್ದೇಶಕರ ಮಂಡಳಿಯ ನಿರ್ದೇಶಕರನ್ನಾಗಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನೇಮಕ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎ.ಎ. ಚಪ್ಪರಬಂದ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

**P.R. 495**

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

### ತಿದ್ದುಪಡಿ ಆದೇಶ

### ಸಂಖ್ಯೆ: ಗ್ರಾಅಪ/05/ಜೀವಿಮು/2012, ಬೆಂಗಳೂರು, ದಿನಾಂಕ: 05–03–2013.

**ವಿಷಯ:** ರಾಜ್ಯದಲ್ಲಿ ಜೀತದಾಳುಗಳನ್ನು ಗುರುತಿಸುವ ಸಲುವಾಗಿ ಸಮೀಕ್ಷೆ ಕಾರ್ಯ ಕೈಗೊಳ್ಳಲು ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ : ಗ್ರಾಅಪ್ರ 05 ಆರ್‌ಬಿಎಲ್ 2012, ದಿನಾಂಕ 13–6–2012.

2. ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ಇವರು ಸರ್ಕಾರಕ್ಕೆ ಸಲ್ಲಿಸಿರುವ ಪತ್ರ ಸಂ. ಎಂ.ಎ.ಜಿ. (4) ಜೀತದಾಳು/ಸಿಆರ್/7/2012–13, ದಿನಾಂಕ 06–02–2013.

ಮೇಲ್ಕಂಡ ಉಲ್ಲೇಖ (1)ರ ಆದೇಶದಲ್ಲಿ ರಾಜ್ಯದಲ್ಲಿ ಜೀತದಾಳುಗಳನ್ನು ಗುರುತಿಸುವ ಸಲುವಾಗಿ ಸಮೀಕ್ಷೆ ಕಾರ್ಯ ಕೈಗೊಳ್ಳಲು ಪ್ರತಿ ಜಿಲ್ಲೆಗೆ ರೂ. 2.00 ಲಕ್ಷಗಳಂತೆ ರಾಜ್ಯದ 30 ಜಿಲ್ಲೆಗಳ ಜಿಲ್ಲಾಧಿಕಾರಿಗಳಿಗೆ ಆಯಾಯ ಜಿಲ್ಲೆಯ ಜಿಲ್ಲಾಧಿಕಾರಿಗಳ ಡಿ.ಡಿ.ಓ. ಕೋಡನ್ನು ನಮೂದಿಸಿ ಒಟ್ಟು ರೂ.60.00 ಲಕ್ಷಗಳ ಅನುದಾನವನ್ನು ಬಿಡುಗಡೆ ಮಾಡಲಾಗಿರುತ್ತದೆ. ಆದರೆ ಉಲ್ಲೇಖ (2)ರ ಪತ್ರದಲ್ಲಿ ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ ಇವರು ತಮ್ಮ ಜಿಲ್ಲೆಯ ಡ್ರಾಯಿಂಗ್ ಕೋಡ್ ನಂಬರ್ 01–00–RD–0004 ಅಲ್ಲದ ಕಾರಣ ಇದನ್ನು 0200RD–0002 ಎಂದು ಸರಿಪಡಿಸುವಂತೆ ಸರ್ಕಾರವನ್ನು ಕೋರಿರುತ್ತಾರೆ. ಆದ್ದರಿಂದ ಉಲ್ಲೇಖ(1)ರ ಆದೇಶದ ಕೋಷ್ಠಕದಲ್ಲಿ ನಮೂದಿಸಿದ ಬೆಂಗಳೂರು ನಗರ ಜಿಲ್ಲೆಯ ಜಿಲ್ಲಾಧಿಕಾರಿಗಳ DDO Code No. 01-00-RD-0004 ಎಂಬುದರ ಬದಲಾಗಿ 0200RD-0002 ಎಂದು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಂ. ದೀಪಾ,**
ನಿರ್ದೇಶಕರು ಸ್ವ.ಉ.ಕಾ.
ಹಾಗೂ ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

**P.R. 496**

## ಇಂಧನ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಇಎನ್ 24 ಸಮನ್ವಯ 2013, ಬೆಂಗಳೂರು, ದಿನಾಂಕ: 28–03–2013.**

ಸರ್ಕಾರದ ಅಧಿಸೂಚನೆ ಸಂಖ್ಯೆ : ಇಎನ್ 20 ಸಮನ್ವಯ 2011 (ಭಾಗ), ದಿನಾಂಕ 02–05–2011 ರಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ, ಬೆಂಗಳೂರು ಇದರ ಮೆಮೊರ್‍ಯಾಂಡಮ್ ಆಫ್ ಅಸೋಸಿಯೇಷನ್ ಮತ್ತು ಆರ್ಟಿಕಲ್ಸ್ ಆಫ್ ಅಸೋಸಿಯೇಷನ್‌ನ ಆರ್ಟಿಕಲ್ 51(ಎ) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಎಚ್.ಆರ್. ನಾಗೇಂದ್ರ, ಸರ್ಕಾರದ ಉಪ ಕಾರ್ಯದರ್ಶಿ, ಇಂಧನ ಇಲಾಖೆ ಇವರನ್ನು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ, ಬೆಂಗಳೂರು ಇದರ ನಿರ್ದೇಶಕರ ಮಂಡಳಿಯ ನಿರ್ದೇಶಕರನ್ನಾಗಿ ನೇಮಿಸಿರುವ ನಾಮನಿರ್ದೇಶನವನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಪಡಿಸಲಾಗಿದೆ.

ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ, ಬೆಂಗಳೂರು ಇದರ ಮೆಮೊರ್‍ಯಾಂಡಮ್ ಆಫ್ ಅಸೋಸಿಯೇಷನ್ ಮತ್ತು ಆರ್ಟಿಕಲ್ಸ್ ಆಫ್ ಅಸೋಸಿಯೇಷನ್‌ನ ಆರ್ಟಿಕಲ್ 51(ಎ) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಆರ್.ಎಂ. ಹಿರಿಯಣ್ಣಯ್ಯ, ಕಾರ್ಯಪಾಲಕ ಅಭಿಯಂತರರು, ಎಸ್ಕಾಮ್ಸ್ ಮಾನಿಟರಿಂಗ್ ಸೆಲ್, ಇಂಧನ ಇಲಾಖೆ ಇವರನ್ನು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ, ಬೆಂಗಳೂರು ಇದರ ನಿರ್ದೇಶಕರ ಮಂಡಳಿಯ ನಿರ್ದೇಶಕರನ್ನಾಗಿ ಈ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನಾಮನಿರ್ದೇಶನ ಮಾಡಿ ನೇಮಕ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎ.ಎ. ಚಪ್ಪರಬಂದ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

**P.R. 497**

## ಇಂಧನ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಇಎನ್ 46 ಸಮನ್ವಯ 2013, ಬೆಂಗಳೂರು, ದಿನಾಂಕ: 02–04–2013.**

ಸರ್ಕಾರದ ಅಧಿಸೂಚನೆ ಸಂಖ್ಯೆ : ಸಿಆಸುಇ 236 ಎಸ್ಎಎಸ್ 2013, ದಿನಾಂಕ 30–03–2013 ಮತ್ತು ದಿನಾಂಕ 30–03–2013ರ ತಿದ್ದುಪಡಿ ಅಧಿಸೂಚನೆಯಲ್ಲಿ ಶ್ರೀ ಎನ್.ಎಸ್. ಪ್ರಸನ್ನ ಕುಮಾರ್, ಭಾ.ಆ.ಸೇ. (ಸ್ಥಳ ನಿಯುಕ್ತಿಗಾಗಿ ಕಾಯುತ್ತಿರುವ) ಇವರನ್ನು ಶ್ರೀ ಪಿ. ರಾಜೇಂದ್ರ ಚೋಳನ್, ಭಾ.ಆ.ಸೇ. ವ್ಯವಸ್ಥಾಪಕ ನಿರ್ದೇಶಕರು, ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ ನಿಯಮಿತ, ಹುಬ್ಬಳ್ಳಿ ಇವರ ವರ್ಗಾವಣೆಯಿಂದ ತೆರವಾದ ಹುದ್ದೆಗೆ ನೇಮಕ ಮಾಡಲು ಇವರ ಸೇವೆಯನ್ನು ಇಂಧನ ಇಲಾಖೆಯ ವಶಕ್ಕೆ ನೀಡಿದ್ದು, ಅದರಂತೆ, ಶ್ರೀ ಎನ್.ಎಸ್. ಪ್ರಸನ್ನ ಕುಮಾರ್, ಭಾ.ಆ.ಸೇ. ಇವರನ್ನು ವ್ಯವಸ್ಥಾಪಕ ನಿರ್ದೇಶಕರು, ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ ನಿಯಮಿತ, ಹುಬ್ಬಳ್ಳಿ ಈ ಹುದ್ದೆಯಲ್ಲಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಮರು ಸ್ಥಳ ನಿಯುಕ್ತಿಗೊಳಿಸಿ ನೇಮಿಸಿದೆ.

ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ ನಿಯಮಿತ, ಹುಬ್ಬಳ್ಳಿ ಕಂಪನಿಯ ಮೆಮೊರ್‍ಯಾಂಡಮ್ ಆಫ್ ಅಸೋಸಿಯೇಷನ್ ಮತ್ತು ಆರ್ಟಿಕಲ್ಸ್ ಆಫ್ ಅಸೋಸಿಯೇಷನ್‌ನ ಆರ್ಟಿಕಲ್ 74(ಎ) ಮತ್ತು (ಬಿ) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಎನ್.ಎಸ್. ಪ್ರಸನ್ನ ಕುಮಾರ್, ಭಾ.ಆ.ಸೇ. ಇವರನ್ನು ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ ನಿಯಮಿತ, ಹುಬ್ಬಳ್ಳಿ ಇದರ ನಿರ್ದೇಶಕ ಮಂಡಳಿಯ ನಿರ್ದೇಶಕರನ್ನಾಗಿ ಹಾಗೂ ವ್ಯವಸ್ಥಾಪಕ ನಿರ್ದೇಶಕರನ್ನಾಗಿ ಶ್ರೀ ಪಿ. ರಾಜೇಂದ್ರ ಚೋಳನ್, ಭಾ.ಆ.ಸೇ. ಇವರ ಸ್ಥಾನದಲ್ಲಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನೇಮಕ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎ.ಎ. ಚಪ್ಪರಬಂದ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

**P.R. 500**

## INFRASTRUCTURE DEVELOPMENT SECRETARIAT

**Subject :** Bagalkot - Kudachi New Broad-gauge line - release of funds - reg

**Read :**
1) G.O. No: IDD 35 NSW 09, dated 24.04.2009
2) D.O.Letter No: 2000/PL/88/12, dated 28/29-06-2010 of The Executive Director/ Perspective Planning, Ministry of Railway Board, New Delhi
3) G.O. No: IDD 46 NSW 2010, dated: 25-02-2011
4) Letter No. RB/ LAQ/ CR-17/ 11-12, dated: 08-12-2011 from Deputy Commissioner, Bagalkot District, Bagalkot.
5) Letter No. ಕಂಶಾ/ಭೂಸ್ವಾ/ವಿವ–07/ 11-12, dated 19-04-2012 from Deputy Commissioner, Belgaum District, Belgaum.
6) Letter No. W63/UBD/CN/MPIC/ dated 30-05-2012, received from the Chief Engineer Construction, SWR, Hubli.

**PREAMBLE :**

In G.O read at (1) above Government of Karnataka has accorded approval to take up Kudachi-Bagalkot New Railway line project on PPP basis. In the letter read at (2) above, the Executive Director/Perspective Planning, Ministry of Railway Board has stated that the project has been sanctioned in 2010-11 budget on cost sharing basis. In addition GoK agreed for providing of Land free of cost. Total cost of the project is Rs. 816.14 crore (Railway's share-408.07 GoK's share-408.07) and total length of the project is 144.05 Km. Total land requirement for these projects is (782 acres and 34 guntas) 316.82 hectares in Bagalkot-Badami-Mudol in 20 villages. Ministry of Railways is taking this project in III phases i.e., 0-0.58 k.m. 58 km-102 km., 102 km – 142 km. The project has been taken up on 50:50 cost sharing basis between Government of Karnataka and Ministry of Railways from 2011-12 onwards.

2. In G.O. read at SI. No. (3) above, Government of Karnataka has released Rs.10.00 crores to the Deputy Commissioner, Bagalkot District towards land acquisition cost of Kudachi - Bagalkot new railway line.

3. In the letter read at SI. No. (4) and (5), the Deputy Commissioners, Bagalkot and Belgaum had requested to release of Rs.11.25 crores and 13.90 crores (Rupees eleven crores and twenty five lakhs and thirteen crores ninety lakhs only) respectively towards acquisition of land for construction of Bagalkot - Kudachi new railway line.

4. In the letter read at SI. No. (6), The Chief Engineer (Construction), SWR, Hubli has reported that the approximate expenditure during current financial year is to be Rs.70.00 crore, the share of GoK will be to the extent of Rs.35.00 crores and requested to release Rs.35.00 crores at the earliest, so that the planned works of the Bagalkot - Kudachi Railway line Project can be executed smoothly.

5. The proposals of Deputy Commissioners, Bagalkot, Belgaum Districts and Chief Enqineer (Construction) SWR, Hubli has been examined in detail and decided to release an amount of Rs.11.25 crores to the Deputy Commissioner, Bagalkot and Rs.13.90 crores to the Deputy Commissioner, Belgaum District out of the budget provision of Rs.100.00 crores provided under the Head of Account "5465-01-190-3-05-133 Special Development Plan" during 2012-13 and Rs.20.00 crores to South Western Railways towards Bagalkot-Kudachi new railway line project through K-RIDE, Bangalore out of the budget provision Rs.11075.00 lakhs provided under the Head of Account "5465-01 - i 90-3-05-211 New Cost Sharing Project investments" during 2012-13.

6. Hence this order.

**GOVERNMENT ORDER NO. IDD 46 NSW 2010, BANGALORE, DATED 19.07.2012**

Under the circumstances explained in the preamble, Government of Karnataka are pleased to release Rs.11.25 crores (Rupees eleven crores and twenty five lakhs only) to the Deputy Commissioner, Bagalkot and Rs.13.90 crores (Rupees thirteen crores ninety lakhs only) to the Deputy Commissioner, Belgaurn District respectively towards acquisition of land for construction of Bagalkot - Kudachi new railway line.

2. This expenditure shall be met under the Head of Account "5465-01-190-3-05-133 Special Development Plan" out of the Budget of Rs.100.00 crores during 2012-13.

3 Government of Karnataka is pleased to release Rs.20.00 crores (Rupees Twenty crores only) to South Western Railways towards construction of Bagalkot – Kudachi new railway line project through K-RIDE out the budget provision of Rs.11075.00 lakhs.

4. This expenditure shall be met under the Head of Account "5465-01-190-3-05-211 New Cost Sharing Project Investments" during 2012-13.

5. The Deputy Commissioner, Bagalkot/ Belgaum Districts and the Chief Executive Officer, K-RIDE, Bangalore is authorized to draw the amount on a payee's receipt duly countersigned by the Under Secretary to Government, Infrastructure Development Department.

6. The Deputy Commissioner, Bagalkot/ Belgaum District shall furnish the utilization certificate and physical progress report to the Government.

7. The CEO, K-RIDE, Banga!ore shall in turn deposit Rs.20.00 crores to the Financial Advisor and Chief Accounts Officer (Construction), South Western Railway Bangaiore.

8. The South Western Railways shall furnish the utilization certificate and physical progress report for further release of funds.

9. This order is issued in accordance with the concurrence of Finance Department vide, Note .No.FD 725 Exp-l / 2012. dated 16-06-2012 and G.O. No. FD 04 TFP 2012, dated: 27-04-2012.

By Order and in the name of the Governor of Karnataka,

**S.J. SAMPATH KUMAR,**

Under Secretary to Government,

Infrastructure Development Department.

**P.R. 501**

## INFRASTRUCTURE DEVELOPMENT SECRETARIAT

### CORRIGENDUM

**NO. IDD 46 NSW 2010, Bangalore, dated 07-08-2012.**

In G.O. No. IDD 46 NSW 2010 dated 19.07.2012, the following sentence appearing at SI. No. (5) of the order portion "The Deputy Commissioner, Bagalkot / Belgaum Districts and the Chief Executive Officer, K-RIDE, Bangalore is authorized to draw the amount on a payee's receipt duly countersigned by the Under Secretary to Government, Infrastructure Development Department".

**shall be read as:-**

**"The Deputy Commissioner, Bagalkot / Belgaum Districts are authorized to draw the funds from the District Treasury, Bagalkot / Belgaum Districts on DC Bills. The Deputy Director, NMC to upload the said amount to the Deputy Commissioner's, Bagalkot / Belgaum Districts Account" and the Chief Executive Officer, K-RIDE, Bangalore is authorized to draw the amount on a payee's receipt duly countersigned by the Under Secretary to Government, Infrastructure Development Department".**

By Order and in the name of the Governor of Karnataka,
**S.J. SAMPATH KUMAR,**
Under Secretary to Government,
Infrastructure Development Department.

**P.R. 506**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದ ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆಯ ಸರ್ಕಾರದ ಕಾರ್ಯದರ್ಶಿ (ಪರಿಸರ ಮತ್ತು ಜೀವಿಶಾಸ್ತ್ರ) ಹುದ್ದೆಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 464 ಎಸ್ಎಎಸ್ 1998; ದಿನಾಂಕ 14–07–1999.
2. ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 136 ಸಅಸೇ 2010; ದಿನಾಂಕ 11–06–2012.
3. ಅನಧಿಕೃತ ಟಿಪ್ಪಣಿ ಸಂಖ್ಯೆ : ಅಪಜೀ 124 ಇಪಿಸಿ 2010; ದಿನಾಂಕ 02–11–2012.

**ಪ್ರಸ್ತಾವನೆ:**

ಕರ್ನಾಟಕ ಸರ್ಕಾರ ಸಚಿವಾಲಯದ ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆಯ ಸರ್ಕಾರದ ಕಾರ್ಯದರ್ಶಿ (ಪರಿಸರ ಮತ್ತು ಜೀವಿಶಾಸ್ತ್ರ) ಹುದ್ದೆಯನ್ನು ತಾತ್ಕಾಲಿಕವಾಗಿ ಸೃಜಿಸಿ ನಿಯಮಿತವಾಗಿ ಮುಂದುವರೆಸಲಾಗಿದೆ. ಮೇಲೆ ಕ್ರಮಾಂಕ (2) ರಲ್ಲಿ ಓದಲಾದ ದಿನಾಂಕ 11–06–2012ರ ಆದೇಶದಲ್ಲಿ ಸದರಿ ಹುದ್ದೆಯನ್ನು ದಿನಾಂಕ 01–04–2012 ರಿಂದ 31–03–2013 ರವರೆಗೆ ತಾತ್ಕಾಲಿಕವಾಗಿ ಮುಂದುವರೆಸಲಾಗಿದೆ.

ಮೇಲೆ ಕ್ರಮಾಂಕ (3) ರಲ್ಲಿ ಓದಲಾದ ಅನಧಿಕೃತ ಟಿಪ್ಪಣಿಯಲ್ಲಿ ಸರ್ಕಾರದ ಕಾರ್ಯದರ್ಶಿ (ಪರಿಸರ ಮತ್ತು ಜೀವಿಶಾಸ್ತ್ರ) ಹುದ್ದೆಯು ಅತ್ಯಂತ ಅವಶ್ಯಕವಾಗಿರುವುದರಿಂದ ಈ ಹುದ್ದೆಯನ್ನು ಶಾಶ್ವತ ಹುದ್ದೆಯನ್ನಾಗಿ ಪರಿವರ್ತಿಸುವಂತೆ ಹಾಗೂ ಆಡಳಿತಾತ್ಮಕ ಹಿತದೃಷ್ಟಿಯಿಂದ ದಿನಾಂಕ 01–04–2013 ರಿಂದ 31–03–2014 ರವರೆಗೆ ಮುಂದುವರೆಸುವಂತೆ ಕೋರಲಾಗಿದೆ.

ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 592 ಸಅಸೇ 2012, ಬೆಂಗಳೂರು, ದಿನಾಂಕ : 6ನೇ ಏಪ್ರಿಲ್ 2013**

ಕರ್ನಾಟಕ ಸರ್ಕಾರ ಸಚಿವಾಲಯದ ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆಯ ಸರ್ಕಾರದ ಕಾರ್ಯದರ್ಶಿ (ಪರಿಸರ ಮತ್ತು ಜೀವಿಶಾಸ್ತ್ರ) ಹುದ್ದೆಯನ್ನು ದಿನಾಂಕ 01–04–2013 ರಿಂದ 31–03–2014 ರವರೆಗೆ ತಾತ್ಕಾಲಿಕವಾಗಿ ಮುಂದುವರೆಸಿ ಆದೇಶಿಸಿದೆ.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ 10–07–1996 ರಲ್ಲಿ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಆರ್ಥಿಕ ಇಲಾಖೆ ಸಹಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಜಿ.ಆರ್. ನಾಗರಾಜ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು–6)

**P.R. 507**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ:** ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಗೆ ಸಂಬಂಧಿಸಿದಂತೆ ಒಂದು ಗಣಕೀಕರಣ ಕೋಶವನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಉಪ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಕಾರ್ಯಕಾರಿ), ಇವರ ಟಿಪ್ಪಣಿ ಸಂಖ್ಯೆ : ಸಿಆಸುಇ 209 ರಾಸವಿ 2012, ದಿನಾಂಕ 05–02–2013.
2. ಸರ್ಕಾರದ ಅಧೀನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವಾ ನಿಯಮಗಳು–2), ಇವರ ಅ.ಟಿ. ಸಂಖ್ಯೆ : ಸಿಆಸುಇ 138 ಸೇನಿಡಿ 2012, ದಿನಾಂಕ 24–12–2012.
3. ಸರ್ಕಾರದ ಸುತ್ತೋಲೆ ಸಂಖ್ಯೆ : ಸಿಆಸುಇ 28 ಆರ್‌ಟಿಐ 2012; ದಿನಾಂಕ 03–04–2012.

**ಪ್ರಸ್ತಾವನೆ:**

ಮೇಲೆ ಕ್ರಮಸಂಖ್ಯೆ (2) ರಲ್ಲಿ ಓದಲಾದ ಅನಧಿಕೃತ ಟಿಪ್ಪಣಿಯಲ್ಲಿ ಮಾಹಿತಿ ಹಕ್ಕು ಅಧಿನಿಯಮ 2005ರ ಸೆಕ್ಷನ್ 4(1)(ಎ) ಮತ್ತು ಸೆಕ್ಷನ್ (1)(ಬಿ) ಅಡಿಯಲ್ಲಿ ಪ್ರಕಟಿಸಬೇಕಾದ ಮಾಹಿತಿಯನ್ನು ಆಯಾ ಇಲಾಖೆಯ ವೆಬ್‌ಸೈಟಿನಲ್ಲಿ ಪ್ರಕಟಿಸಲು NIC ಗೆ ಕಳುಹಿಸುವ ಬದಲಾಗಿ, ಮೇಲೆ ಕ್ರಮಾಂಕ (3) ರಲ್ಲಿ ಓದಲಾದ ಸುತ್ತೋಲೆಯಲ್ಲಿನ ಸೂಚನೆಯನ್ವಯ ಆಯಾ ಇಲಾಖೆಯವರೇ ಕ್ರಮ ತೆಗೆದುಕೊಳ್ಳಬೇಕಾಗಿರುವುದರಿಂದ ಈ ಕೂಡಲೇ ಒಂದು ಗಣಕೀಕರಣ ಕೋಶವನ್ನು ಸೃಜಿಸುವಂತೆ ಕೋರಲಾಗಿದೆ.

ಮುಂದುವರೆದು, ಮೇಲೆ ಕ್ರಮಾಂಕ (1) ರಲ್ಲಿ ಓದಲಾದ ಟಿಪ್ಪಣಿಯಲ್ಲಿ ಮಾಹಿತಿ ಹಕ್ಕು ಅಧಿನಿಯಮ 2005 ರಡಿಯಲ್ಲಿ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಗೆ ಸಂಬಂಧಿಸಿದ ಮಾಹಿತಿಯನ್ನು Update ಮಾಡುವುದರ ಜೊತೆಗೆ, ಸಚಿವಾಲಯ ವಾಹಿನಿ ತಂತ್ರಾಂಶದ ನಿರ್ವಹಣೆ, ಕಡತ ಮತ್ತು ಪತ್ರಗಳ ಪರಿಶೀಲನಾ ಸಭೆಗಳಿಗೆ ಹಾಜರಾಗುವುದು. ಈ ಮೂಲಕ ತಂತ್ರಾಂಶದ ಅಭಿವೃದ್ಧಿಗೆ ನೆರವಾಗುವುದು. ಗಣಕ ಯಂತ್ರಗಳ ದೂರಿನ ನಿರ್ವಹಣೆ, ಎಲ್ಲಾ ಶಾಖೆಗಳ ಪತ್ರ ಮತ್ತು ಕಡತಗಳ ನಿರ್ವಹಣೆಯಲ್ಲಿ ಸಹಾಯ ಬೇಕಾದಾಗ ಒದಗಿಸುವುದು, SAKALA ತಂತ್ರಾಂಶದ ನಿರ್ವಹಣೆ, ಇತ್ಯಾದಿ ಕಾರ್ಯಗಳನ್ನು ನಿರ್ವಹಿಸಲು ಈ ಕೆಳಕಂಡಂತೆ ತಾಂತ್ರಿಕ ಪರಿಣಿತಿ ಹೊಂದಿರುವ ಸಿಬ್ಬಂದಿಯೊಂದಿಗೆ ಒಂದು ಗಣಕೀಕರಣ ಕೋಶವನ್ನು (ತಾಂತ್ರಿಕ ಕೋಶ) ಸೃಜಿಸುವಂತೆ ಕೋರಲಾಗಿದೆ.

| ಕ್ರಮ ಸಂಖ್ಯೆ | ಹುದ್ದೆಗಳ ವಿವರ | ಹುದ್ದೆಗಳ ಸಂಖ್ಯೆ |
|---|---|---|
| 1 | ಸೀನಿಯರ್ ಪ್ರೋಗ್ರಾಮರ್ (ಅಧೀನ ಕಾರ್ಯದರ್ಶಿ ಹುದ್ದೆಗೆ ಸಮಾನಾಂತರ) | 1 |
| 2 | ಜೂನಿಯರ್ ಪ್ರೋಗ್ರಾಮರ್ (ಶಾಖಾಧಿಕಾರಿ ಹುದ್ದೆಗೆ ಸಮಾನಾಂತರ) | 1 |
| 3 | ಪ್ರೋಗ್ರಾಮಿಂಗ್ ಅಸಿಸ್ಟೆಂಟ್ (ಹಿರಿಯ ಸಹಾಯಕ ಹುದ್ದೆಗೆ ಸಮಾನಾಂತರ) | 3 |
| 4 | ಡಾಟಾ ಎಂಟ್ರಿ ಆಪರೇಟರ್ (ಸಹಾಯಕ ಹುದ್ದೆಗೆ ಸಮಾನಾಂತರ) | 3 |
| | **ಒಟ್ಟು** | **08** |

ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 225 ಸಅಸೇ 2013, ಬೆಂಗಳೂರು, ದಿನಾಂಕ : 1ನೇ ಏಪ್ರಿಲ್ 2013**

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಸಮನ್ವಯ ಶಾಖೆಯಡಿ ಈ ಕೆಳಕಂಡ ಸಿಬ್ಬಂದಿಯನ್ನೊಳಗೊಂಡ ಒಂದು ಗಣಕೀಕರಣ ಕೋಶವನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ಸೃಜಿಸಿ ಆದೇಶಿಸಿದೆ.

| ಕ್ರಮ ಸಂಖ್ಯೆ | ಹುದ್ದೆಗಳ ವಿವರ | ಹುದ್ದೆಗಳ ಸಂಖ್ಯೆ |
|---|---|---|
| 1 | ಸೀನಿಯರ್ ಪ್ರೋಗ್ರಾಮರ್ (ಅಧೀನ ಕಾರ್ಯದರ್ಶಿ ಹುದ್ದೆಗೆ ಸಮಾನಾಂತರ) | 1 |
| 2 | ಜೂನಿಯರ್ ಪ್ರೋಗ್ರಾಮರ್ (ಶಾಖಾಧಿಕಾರಿ ಹುದ್ದೆಗೆ ಸಮಾನಾಂತರ) | 1 |
| 3 | ಪ್ರೋಗ್ರಾಮಿಂಗ್ ಅಸಿಸ್ಟೆಂಟ್ (ಹಿರಿಯ ಸಹಾಯಕ ಹುದ್ದೆಗೆ ಸಮಾನಾಂತರ) | 2 |
| 4 | ಡಾಟಾ ಎಂಟ್ರಿ ಆಪರೇಟರ್ (ಸಹಾಯಕ ಹುದ್ದೆಗೆ ಸಮಾನಾಂತರ) | 2 |
| | **ಒಟ್ಟು** | **06** |

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಆಇ 144 ವೆಚ್ಚ-12/2013, ದಿನಾಂಕ 23-02-2013 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಜಿ.ಆರ್. ನಾಗರಾಜ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು-6)

P.R. 508

## ತೋಟಗಾರಿಕೆ ಸಚಿವಾಲಯ

**ವಿಷಯ :** ಕರ್ನಾಟಕ ರೇಷ್ಮೆ ಮಾರಾಟ ಮಂಡಳಿಯು ಹಳೆಯ 25 ಮಂದಿ ಸುಸ್ತಿದಾರರಿಗೆ ಬಾಕಿ ಪಾವತಿಸಲು ಜಾರಿಗೊಳಿಸಲಿರುವ ಸಮಾಧಾನ ಯೋಜನೆ/ಒಂದೇ ಬಾರಿ ಇತ್ಯರ್ಥ ಯೋಜನೆ (OTS) ಯನ್ನು ಅನುಷ್ಠಾನಗೊಳಿಸಲು ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ :** 1. ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರೇಷ್ಮೆ ಮಾರಾಟ ಮಂಡಳಿ ಇವರ ಪತ್ರ ಸಂಖ್ಯೆ: ಕರೇಮಾಮ/ ವಸೂಲಿ/2011-12/1802, ದಿನಾಂಕ: 17-03-2012

2. ಸರ್ಕಾರದ ಪತ್ರ ಸಂಖ್ಯೆ: ತೋಇ 17 ರೇಉನಿ 2011, ದಿನಾಂಕ: 16-04-2012

3. ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರೇಷ್ಮೆ ಮಾರಾಟ ಮಂಡಳಿ ಇವರ ಪತ್ರ ಸಂಖ್ಯೆ: ಕರೇಮಾಮ/ ವಸೂಲಿ/2012-13/374, ದಿನಾಂಕ: 08-08-2012

**ಪ್ರಸ್ತಾವನೆ:**

ಕರ್ನಾಟಕ ರೇಷ್ಮೆ ಮಾರಾಟ ಮಂಡಳಿಯ ಬೆಂಗಳೂರು ಮಾರಾಟ ಶಾಖೆಯ ಸುಸ್ತಿದಾರರಾದ ಶ್ರೀ ಮೊ. ಜಹೀರುದ್ದೀನ್ ಮತ್ತು ಷೇಕ್ ಸಲಾವುದ್ದೀನ್ ಇವರು ಉಚ್ಚ ನ್ಯಾಯಾಲಯದಲ್ಲಿ ಮಂಡಳಿಯಿಂದ ತಮ್ಮ ಆಸ್ತಿಯ ಹರಾಜು ಪ್ರಕ್ರಿಯೆ ವಿರುದ್ಧ ರಿಟ್ ಅರ್ಜಿ ಸಂಖ್ಯೆ: 47273/2011 ಮತ್ತು 47272/2011 ಸಲ್ಲಿಸಿರುತ್ತಾರೆ. ಪ್ರಕರಣದಲ್ಲಿ ಮಾನ್ಯ ಉಚ್ಚ ನ್ಯಾಯಾಲಯವು ದಿನಾಂಕ: 10-01-2012ರ ಆದೇಶದಲ್ಲಿ ಅಂತಿಮ ತೀರ್ಮಾನ ನೀಡಿ, ಮಂಡಳಿಯ ಇತರೆ ಸುಸ್ತಿದಾರರಾದ ಶ್ರೀ ಕೆ. ಕೃಷ್ಣರಾಜು ಎಂಬುವವರ ಪ್ರಕರಣದಲ್ಲಿ ಪೂರ್ತಿ ಬಡ್ಡಿ ಮನ್ನಾ ಮಾಡಿರುವಂತೆ ಈ ಸುಸ್ತಿದಾರರ ಪ್ರಕರಣದಲ್ಲಿಯೂ ಸಹ ಅಸಲನ್ನು ಕಟ್ಟಿಸಿಕೊಂಡು ಬಡ್ಡಿ ಮನ್ನಾ ಮಾಡುವಂತೆ ಪರಿಶೀಲಿಸಬೇಕೆಂದು ಆದೇಶಿಸಿರುತ್ತದೆ. ಈ ಆದೇಶದ ಬಗ್ಗೆ 166ನೇ ನಿರ್ದೇಶಕರ ಮಂಡಳಿ ಸಭೆಯಲ್ಲಿ, ಸರ್ಕಾರದ ತೀರ್ಮಾನಕ್ಕೆ ಸಲ್ಲಿಸಲು ತೀರ್ಮಾನಿಸಿ, ಮಾನ್ಯ ನ್ಯಾಯಾಲಯದ ಆದೇಶದಂತೆ ಸುಸ್ತಿದಾರರಾದ ಶ್ರೀ ಮೊ. ಜಹೀರುದ್ದೀನ್‌ರವರು ದಿನಾಂಕ: 31-01-2011ರಂದು ಅಸಲು ಮೊತ್ತ ರೂ. 6,37,000/- ಪಾವತಿಸಿದ್ದು, ಇವರ ಖಾತೆಯಲ್ಲಿ ಉಳಿಕೆ ಬಡ್ಡಿ ರೂ. 27,02,522/- ಇರುತ್ತದೆ. ಶ್ರೀ ಷೇಕ್ ಸಲಾವುದ್ದೀನ್‌ರವರು ದಿನಾಂಕ: 31-01-2011ರಂದು ಅಸಲು ಮೊತ್ತ ರೂ. 3,07,812/-ಗಳನ್ನು ಪಾವತಿಸಿದ್ದು, ಇವರ ಖಾತೆಯಲ್ಲಿ ಉಳಿಕೆ ಬಡ್ಡಿ ರೂ. 9,03,445/-ಗಳು ಇದ್ದು, ಮೇಲ್ಕಂಡ ಬಡ್ಡಿಯನ್ನು ಮನ್ನಾ ಮಾಡುವ ಬಗ್ಗೆ ಸರ್ಕಾರದ ತೀರ್ಮಾನಕ್ಕಾಗಿ ಮೇಲೆ ಓದಲಾದ ಉಲ್ಲೇಖ (1)ರ ಪತ್ರದಲ್ಲಿ ಮಂಡಳಿಯ ವ್ಯವಸ್ಥಾಪಕ ನಿರ್ದೇಶಕರು, ಸರ್ಕಾರವನ್ನು ಕೋರಿರುತ್ತಾರೆ.

ಮೇಲೆ ಓದಲಾದ ಕ್ರಮಸಂಖ್ಯೆ (2)ರ ಪತ್ರದಲ್ಲಿ ಬಾಕಿ ವಸೂಲಾತಿ ಕುರಿತು ಒಂದು ನಿರ್ದಿಷ್ಟ ಯೋಜನೆಯನ್ನು ರೂಪಿಸಿ, ಸರ್ಕಾರದ ಅನುಮೋದನೆ ಪಡೆದು ಅದರಂತೆ ಕ್ರಮ ಕೈಗೊಳ್ಳುವಂತೆ ಹಾಗೂ ಒಂದು ವೇಳೆ ಇಂತಹ ಯೋಜನೆ ಅಸ್ತಿತ್ವದಲ್ಲಿ ಇದ್ದಲ್ಲಿ, ಇಂತಹ ಎಲ್ಲಾ ಬಾಕಿ ಪಾವತಿಸುವ ಪ್ರಸ್ತಾವನೆಗಳನ್ನು ಅದರನ್ವಯ ಪರಿಶೀಲಿಸುವಂತೆ ಮಂಡಳಿಯ ವ್ಯವಸ್ಥಾಪಕ ನಿರ್ದೇಶಕರಿಗೆ ತಿಳಿಸಲಾಗಿತ್ತು.

ಮೇಲೆ ಓದಲಾದ ಕ್ರಮಸಂಖ್ಯೆ (3)ರ ಪತ್ರದಲ್ಲಿ ಮಂಡಳಿಯ ವ್ಯವಸ್ಥಾಪಕ ನಿರ್ದೇಶಕರು ವಿವರವಾದ ಪ್ರಸ್ತಾವನೆ ಸಲ್ಲಿಸಿ, ಮಂಡಳಿಯ ಒಂದೇ ಬಾರಿ ಇತ್ಯರ್ಥ ಯೋಜನೆಯಲ್ಲಿ 25 ಹಳೆಯ ಸುಸ್ತಿದಾರರು ಬಾಕಿದಾರರಾಗಿರುತ್ತಾರೆ. ಈ ಬಾಕಿದಾರರ ಸ್ಥಿರಾಸ್ತಿಗಳನ್ನು ಹಲವಾರು ಬಾರಿ ಹರಾಜಿಗೆ ತಂದಾಗಲೂ ಯಾರು ಬಿಡ್ಡುದಾರರು ಭಾಗವಹಿಸದೇ ಹರಾಜನ್ನು ಮುಂದೂಡಲಾಗಿರುತ್ತದೆ ಹಾಗೂ ಕೆಲವು ಪ್ರಕರಣಗಳು ನ್ಯಾಯಾಲಯದ ಮುಂದೆ ಬಾಕಿ ಇರುತ್ತದೆ. ಸುಸ್ತಿದಾರರು ಉಚ್ಚ ನ್ಯಾಯಾಲಯದ ಮೊರೆ ಹೋಗಿ ನ್ಯಾಯಾಲಯವು ಇವರಿಗೆ ಮಂಡಳಿಯಲ್ಲಿ ಈ ಹಿಂದೆ ಕೆ. ಕೃಷ್ಣರಾಜು ಎಂಬುವವರ ಪ್ರಕರಣದಲ್ಲಿ ಅಸಲನ್ನು ಕಟ್ಟಿಸಿಕೊಂಡು ಬಡ್ಡಿ ಮನ್ನಾ ಮಾಡಿರುವಂತೆ ಸದರಿ ರಿಟ್ ಅರ್ಜಿ ಪ್ರಕರಣಗಳಲ್ಲಿಯೂ ಸಹ ಅಸಲನ್ನು ಕಟ್ಟಿಸಿಕೊಂಡು ಬಡ್ಡಿ ಮನ್ನಾ ಮಾಡಲು ಪರಿಶೀಲಿಸುವಂತೆ ಆದೇಶಿಸಿರುತ್ತದೆ. ಈ ಯೋಜನೆಯಡಿಯಲ್ಲಿ ನ್ಯಾಯಾಲಯದ ಮೊರೆ ಹೋಗಿರುವ ಸುಸ್ತಿದಾರರ ಪ್ರಕರಣಗಳನ್ನು ಸಹ ಸೇರಿಸಲಾಗಿದೆ. ಈಗ, 25 ಸುಸ್ತಿದಾರರ ಪೈಕಿ 24 ಸುಸ್ತಿದಾರರ ಅಸಲು ರೂ. 5.00 ಲಕ್ಷಕ್ಕಿಂತ ಕಡಿಮೆ ಇದ್ದು, ಇವರು ದಿನಾಂಕ: 31-03-2012ರಂದು ರೂ. 29,50,605/- ಅಸಲು ಬಾಕಿ ಉಳಿಸಿಕೊಂಡಿರುತ್ತಾರೆ ಮತ್ತು ಇವರಿಂದ ಸರಳ ಬಡ್ಡಿ ಶೇ. 12ರಷ್ಟು (2011-12 ರಲ್ಲಿದ್ದಂತೆ) ರೂ. 80,96,578/- ಬರಬೇಕಾಗಿರುತ್ತದೆ ಮತ್ತು ಸುಸ್ತಿ ಬಡ್ಡಿ ಶೇ. 5ರಷ್ಟು ರೂ. 33,73,573/- ಬರಬೇಕಾಗಿರುತ್ತದೆ. ಒಟ್ಟಾರೆಯಾಗಿ ಈ 24 ಸುಸ್ತಿದಾರರು ಅಸಲು ರೂ. 29,50,605/- ಬಾಕಿ ಪಾವತಿಸಿದ್ದಲ್ಲಿ ಸರಳಬಡ್ಡಿ ಮತ್ತು ಸುಸ್ತಿ ಬಡ್ಡಿ ಸೇರಿ ರೂ. 1,14,70,151/- ಮನ್ನಾ ಮಾಡಬೇಕಾಗಿರುತ್ತದೆ.

ಒಬ್ಬ ಸುಸ್ತಿದಾರರು ಮಾತ್ರ ರೂ. 5.00 ಲಕ್ಷಕ್ಕೆ ಮೇಲ್ಪಟ್ಟು ಬಾಕಿ ಉಳಿಸಿದ್ದು, ಇವರು ದಿನಾಂಕ: 31-03-2012ರಂದು ರೂ. 6,37,771/- ಅಸಲು ಬಾಕಿ ಉಳಿಸಿಕೊಂಡಿರುತ್ತಾರೆ. ಸರಳ ಬಡ್ಡಿ ಶೇ. 12ರಂತೆ ರೂ. 19,07,943/- ಬಾಕಿ ಬರಬೇಕಾಗಿರುತ್ತದೆ. ಮತ್ತು ಸುಸ್ತಿ ಬಡ್ಡಿ ಶೇ. 5 ರಂತೆ ರೂ. 7,94,976/- ಬರಬೇಕಾಗಿರುತ್ತದೆ. ಇವರು ಈ ಯೋಜನೆಯಡಿಯಲ್ಲಿ ಅಸಲು ಮತ್ತು ಸರಳಬಡ್ಡಿ ಶೇ. 25ರಷ್ಟು ಬಾಕಿ ಪಾವತಿಸಬೇಕಾಗಿದ್ದು, ಅಂದರೆ, ರೂ. 6,37,771/- + ಸರಳ ಬಡ್ಡಿ ರೂ. 4,76,976/- ಒಟ್ಟಾರೆ ರೂ. 11,14,757/- ಬಾಕಿ ಪಾವತಿಸಿದ್ದಲ್ಲಿ ರೂ. 22,25,933/- ಗಳನ್ನು ಮಾಡಲಾಗುತ್ತದೆ.

ಈ ಸಂಬಂಧವಾಗಿ ಇತ್ತೀಚೆಗೆ ಮಾನ್ಯ ಉಚ್ಚ ನ್ಯಾಯಾಲಯವು ಅಸಲನ್ನು ಕಟ್ಟಿಸಿಕೊಂಡು ಪೂರ್ತಿ ಬಡ್ಡಿಯನ್ನು ಮನ್ನಾ ಮಾಡಲು ಪರಿಶೀಲಿಸುವಂತೆ ಆದೇಶ ಹೊರಡಿಸಿದ್ದು, ಈ ವಿಷಯದಲ್ಲಿ ಒಂದು ನಿರ್ದಿಷ್ಟ ಯೋಜನೆಯನ್ನು ರೂಪಿಸಿ ಸರ್ಕಾರಕ್ಕೆ ಸಲ್ಲಿಸಿ ಅನುಮೋದನೆ ಪಡೆಯುವಂತೆ ಸೂಚಿಸಿರುವ ಹಿನ್ನೆಲೆಯಲ್ಲಿ ಒಂದಾವರ್ತಿ ತೀರುವಳಿ ಯೋಜನೆಯನ್ನು ಪರಿಶೀಲಿಸಿ ಕರ್ನಾಟಕ ರೇಷ್ಮೆ ಮಾರಾಟ ಮಂಡಳಿಯ ಸುಸ್ತಿದಾರರಿಗೆ ಹೊಂದಾಣಿಕೆಯಾಗುವಂತಹ "ಒಂದೇ ಬಾರಿಗೆ ಇತ್ಯರ್ಥ ಯೋಜನೆ"ಯನ್ನು ಈ ಕೆಳಕಂಡಂತೆ ತಯಾರಿಸಿ ಸರ್ಕಾರದ ಅನುಮೋದನೆಗಾಗಿ ಸಲ್ಲಿಸಿರುತ್ತಾರೆ.

1. **ರೂ. 5.00 ಲಕ್ಷಕ್ಕಿಂತ ಕಡಿಮೆ ಸಾಲಗಳ (ಅಸಲು) ಬಗ್ಗೆ:**
   ಅ) ಸಂಪೂರ್ಣ ಅಸಲು ಮೊತ್ತವನ್ನು ಸುಸ್ತಿದಾರರು ಪಾವತಿಸತಕ್ಕದ್ದು.
   ಆ) ಶೇ. 100ರಷ್ಟು ಸರಳ ಬಡ್ಡಿ ಮತ್ತು ಸುಸ್ತಿ ಬಡ್ಡಿ ಮತ್ತು ಪಿಎಂಆರ್‌ಎ ಶುಲ್ಕವನ್ನು ಮನ್ನಾ ಮಾಡಲಾಗುವುದು.

2. **ರೂ. 5.00 ಲಕ್ಷಗಳಿಂದ 10.00 ಲಕ್ಷಗಳವರೆಗಿನ ಸಾಲಗಳ (ಅಸಲು) ಬಗ್ಗೆ:**
   ಅ) ಸಂಪೂರ್ಣ ಅಸಲು ಮೊತ್ತವನ್ನು ಸುಸ್ತಿದಾರರು ಪಾವತಿಸತಕ್ಕದ್ದು.
   ಆ) ಶೇ. 25ರಷ್ಟು ಸರಳ ಬಡ್ಡಿಯನ್ನು ಸುಸ್ತಿದಾರರು ಪಾವತಿಸತಕ್ಕದ್ದು.
   ಇ) ಪೂರ್ತಿ ಶೇ. 75ರಷ್ಟು ಸರಳ ಬಡ್ಡಿಯನ್ನು ಮತ್ತು ಸಂಪೂರ್ಣ ಸುಸ್ತಿ ಬಡ್ಡಿ ಮತ್ತು ಪಿ.ಎಂ.ಆರ್.ಎ. ಶುಲ್ಕವನ್ನು ಮನ್ನಾ ಮಾಡಲಾಗುವುದು.

ಈ ಯೋಜನೆಯನ್ನು ಯಾವ ದಿನಾಂಕದಂದು ಅನುಷ್ಠಾನಗೊಳಿಸಲಾಗುವುದೋ ಈ ದಿನಾಂಕದಂದು **ಖಾತೆಯಲ್ಲಿರುವ ಅಸಲು ಬಾಕಿಯನ್ನು ಗಣನೆಗೆ ತೆಗೆದುಕೊಳ್ಳುವುದು** ಮತ್ತು ನ್ಯಾಯಾಲಯದಲ್ಲಿ ಪ್ರಕರಣಗಳು ಬಾಕಿ ಇದ್ದಲ್ಲಿ ಮಂಡಳಿಯ

ವಕೀಲರಿಗೆ ಪಾವತಿಸುವ ವಕೀಲರ ಶುಲ್ಕ ಮತ್ತು ಇತರೆ ಖರ್ಚನ್ನು ಅಸಲಿಗೆ ಸೇರಿಸಿ ಗಣನೆಗೆ ತೆಗೆದುಕೊಳ್ಳುವುದು. ಈಗಾಗಲೇ ಗುರ್ತಿಸಿರುವ 25 ಪ್ರಕರಣಗಳಿಗೆ ಮಾತ್ರ ಈ ಯೋಜನೆಯು ಅನ್ವಯಿಸುವುದು. ನ್ಯಾಯಾಲಯವು ಈಗಾಗಲೇ 3 ಜನ ಸುಸ್ತಿದಾರರು ಪ್ರಕರಣದಲ್ಲಿ ಅಸಲನ್ನು ಕಟ್ಟಿಸಿಕೊಂಡು ಬಡ್ಡಿ ಮನ್ನಾ ಮಾಡುವ ಬಗ್ಗೆ ಪರಿಶೀಲಿಸಲು ಆದೇಶ ಹೊರಡಿಸಿದ್ದು ಈ ಪ್ರಕರಣಗಳನ್ನು ಕೂಡ ಗಣನೆಗೆ ತೆಗೆದುಕೊಳ್ಳುವುದು.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ, ಮೇಲಿನ ಸಂಕ್ಷಿಪ್ತ ವಿವರಗಳ ಹಿನ್ನೆಲೆಯಲ್ಲಿ ನಿರ್ಣಯ ತೆಗೆದುಕೊಂಡು ಈ ಕೆಳಕಂಡಂತೆ ಸರ್ಕಾರವು ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ತೋಇ 59 ರೇಉನಿ 2012, ಬೆಂಗಳೂರು, ದಿನಾಂಕ: 19ನೇ ಮಾರ್ಚ್, 2013**

ಈ ಕೆಳಕಂಡ ಅಂಶಗಳನ್ನು ಪರಿಗಣಿಸಿ, ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಕರ್ನಾಟಕ ರೇಷ್ಮೆ ಮಾರಾಟ ಮಂಡಳಿಯು ಜಾರಿಗೆ ತರಲಿರುವ "ಒಂದೇ ಬಾರಿಗೆ ಇತ್ಯರ್ಥ ಯೋಜನೆ"ಗೆ ಸರ್ಕಾರದ ಅನುಮೋದನೆಯನ್ನು ನೀಡಿ ಆದೇಶಿಸಲಾಗಿದೆ.

1. **ರೂ. 5.00 ಲಕ್ಷಕ್ಕಿಂತ ಕಡಿಮೆ ಸಾಲಗಳ (ಅಸಲು) ಬಗ್ಗೆ:**
   ಅ) ಸಂಪೂರ್ಣ ಅಸಲು ಮೊತ್ತವನ್ನು ಸುಸ್ತಿದಾರರು ಪಾವತಿಸತಕ್ಕದ್ದು.
   ಆ) ಶೇ. 100ರಷ್ಟು ಸರಳ ಬಡ್ಡಿ ಮತ್ತು ಸುಸ್ತಿ ಬಡ್ಡಿ ಮತ್ತು ಪಿಎಂಆರ್ಎ ಶುಲ್ಕವನ್ನು ಮನ್ನಾ ಮಾಡಲಾಗುವುದು.
2. **ರೂ. 5.00 ಲಕ್ಷಗಳಿಂದ 10.00 ಲಕ್ಷಗಳವರೆಗಿನ ಸಾಲಗಳ (ಅಸಲು) ಬಗ್ಗೆ:**
   ಅ) ಸಂಪೂರ್ಣ ಅಸಲು ಮೊತ್ತವನ್ನು ಸುಸ್ತಿದಾರರು ಪಾವತಿಸತಕ್ಕದ್ದು.
   ಆ) ಶೇ. 25ರಷ್ಟು ಸರಳ ಬಡ್ಡಿಯನ್ನು ಸುಸ್ತಿದಾರರು ಪಾವತಿಸತಕ್ಕದ್ದು.
   ಇ) ಪೂರ್ತಿ ಶೇ. 75ರಷ್ಟು ಸರಳ ಬಡ್ಡಿಯನ್ನು ಮತ್ತು ಸಂಪೂರ್ಣ ಸುಸ್ತಿ ಬಡ್ಡಿ ಮತ್ತು ಪಿ.ಎಂ.ಆರ್.ಎ. ಶುಲ್ಕವನ್ನು ಮನ್ನಾ ಮಾಡಲಾಗುವುದು.

ಈ ಯೋಜನೆಯನ್ನು ಯಾವ ದಿನಾಂಕದಂದು ಅನುಷ್ಠಾನಗೊಳಿಸಲಾಗುವುದೋ ಈ ದಿನಾಂಕದಂದು **ಖಾತೆಯಲ್ಲಿರುವ ಅಸಲು ಬಾಕಿಯನ್ನು ಗಣನೆಗೆ ತೆಗೆದುಕೊಳ್ಳುವುದು** ಮತ್ತು ನ್ಯಾಯಾಲಯದಲ್ಲಿ ಪ್ರಕರಣಗಳು ಬಾಕಿ ಇದ್ದಲ್ಲಿ ಮಂಡಳಿಯ ವಕೀಲರಿಗೆ ಪಾವತಿಸುವ ವಕೀಲರ ಶುಲ್ಕ ಮತ್ತು ಇತರೆ ಖರ್ಚನ್ನು ಅಸಲಿಗೆ ಸೇರಿಸಿ ಗಣನೆಗೆ ತೆಗೆದುಕೊಳ್ಳುವುದು. ಈಗಾಗಲೇ ಗುರ್ತಿಸಿರುವ 25 ಪ್ರಕರಣಗಳಿಗೆ ಮಾತ್ರ ಈ ಯೋಜನೆಯು ಅನ್ವಯಿಸುವುದು. ನ್ಯಾಯಾಲಯವು ಈಗಾಗಲೇ 3 ಜನ ಸುಸ್ತಿದಾರರು ಪ್ರಕರಣದಲ್ಲಿ ಅಸಲನ್ನು ಕಟ್ಟಿಸಿಕೊಂಡು ಬಡ್ಡಿ ಮನ್ನಾ ಮಾಡುವ ಬಗ್ಗೆ ಪರಿಶೀಲಿಸಲು ಆದೇಶ ಹೊರಡಿಸಿದ್ದು ಈ ಪ್ರಕರಣಗಳನ್ನು ಕೂಡ ಗಣನೆಗೆ ತೆಗೆದುಕೊಳ್ಳುವುದು.

**ಅಂಶಗಳು :**

5. Though the waiving of interest can be questioned on the ground of equity (as all loan/interest waive scheme are inherently inequitable and prejudiced against disciplined borrowers), Government agrees in the interest of atleast recovering the principal amount. The cost to KSMB will be Rs. 1.37 crores.
6. As far as 3 High Court cases are concerned, the KSMB might consider them under the new OTS. In any case 2 cases are less than Rs. 5.00 lakhs and so, new OTS scheme and HC order are in consonance. Third case will involve payment of Rs. 4.77 lakh (25% of interest) being more than Rs. 5.00 lakh. This will be over and above the High Court Order.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: FD/400/Exp-4/2012, ದಿನಾಂಕ: 01–01–2013ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಬಿ.ಎಸ್. ಚಂದ್ರಶೇಖರ್,**
ಪೀಠಾಧಿಕಾರಿ,
ತೋಟಗಾರಿಕೆ ಇಲಾಖೆ (ರೇಷ್ಮೆ)

**P.R. 483**

## ಕಾರ್ಮಿಕ ಸಚಿವಾಲಯ

**ವಿಷಯ :** NIMI (National Instructional Media Institute) ಚೆನ್ನೈ ಇವರ ಆಂಗ್ಲ ಭಾಷೆಯ ಪುಸ್ತಕಗಳನ್ನು ಸರಳ ಕನ್ನಡ ಭಾಷೆಗೆ ಅನುವಾದಗೊಳಿಸುವ ಬಗ್ಗೆ

**ಓದಲಾಗಿದೆ :** ಆಯುಕ್ತರು, ಉದ್ಯೋಗ ಮತ್ತು ತರಬೇತಿ ಇಲಾಖೆ ಇವರ ಪತ್ರ ಸಂಖ್ಯೆ: ಉತಇ/ತ/ವೃಪವಿ/ಕುತಯೋ–1/ವಿವ–55/ 2011-12, ದಿನಾಂಕ: 23–03–2013

**ಪ್ರಸ್ತಾವನೆ:**

ಮೇಲೆ ಓದಲಾದ ಆಯುಕ್ತರು, ಉದ್ಯೋಗ ಮತ್ತು ತರಬೇತಿ ಇಲಾಖೆ ಇವರ ಪತ್ರದಲ್ಲಿ NIMI (National Instructional Media Institute) ಆಂಗ್ಲ ಭಾಷೆಯ ಪಠ್ಯ ಪುಸ್ತಕಗಳು ಅಂದರೆ ಪ್ರಮುಖ ವೃತ್ತಿಗಳಾದ ಫಿಟ್ಟರ್/ಮೆಷಿನಿಷ್ಟ್/ಟರ್ನರ್/ಎಲೆಕ್ಟ್ರಿಷಿಯನ್/ಎಲೆಕ್ಟ್ರಾನಿಕ್ ಮೆಕ್ಯಾನಿಕ್/ಮೆಕ್ಯಾನಿಕ್

(ಡೀಸಲ್)/ಎಂ.ಎಂ.ವಿ ವೃತ್ತಿಗಳಲ್ಲಿ ಕನ್ನಡ ಭಾಷೆಯಲ್ಲಿ ಬಿಡುಗಡೆಗೊಂಡಿದ್ದು, ತರಬೇತಿದಾರರಿಗೆ ಕನ್ನಡದ ಕೆಲವು ತಾಂತ್ರಿಕ ಪದಗಳು ಕಠಿಣವೆನಿಸುತ್ತಿದ್ದು, ಇವುಗಳನ್ನು ತರಬೇತಿದಾರರು ಆಡು ಭಾಷೆಯಲ್ಲಿ ಅರ್ಥೈಸಿಕೊಳ್ಳುವಂತೆ, ಪಠ್ಯ ಪುಸ್ತಕಗಳನ್ನು ಅನುವಾದಗೊಳಿಸುವುದು ಅವಶ್ಯಕವಾಗಿರುತ್ತದೆ ಎಂದು, ಪ್ರಚಲಿತ ವೃತ್ತಿಗಳಾದ ಫಿಟ್ಟರ್/ಎಲೆಕ್ಟ್ರಿಷಿಯನ್ ಇವುಗಳಲ್ಲಿ NIMI ಪಠ್ಯ ಪುಸ್ತಕಗಳನ್ನು ಮೊದಲನೆ ಹಂತದಲ್ಲಿ ಸರಳ ಕನ್ನಡಕ್ಕೆ ಅನುವಾದಗೊಳಿಸಲು ಹಾಗೂ ಕೆಲವು ಎಂ.ಇ.ಎಸ್. ವೃತ್ತಿಗಳಾದ ಬೇಸಿಕ್ ವೆಲ್ಡಿಂಗ್ (Arc), ಬೇಸಿಕ್ ವೆಲ್ಡಿಂಗ್ (ಗ್ಯಾಸ್), ಬೇಸಿಕ್ ರೆಫ್ರಿಜರೇಷನ್ ಅಂಡ್ ಏರ್ ಕಂಡೀಷನಿಂಗ್ ಹಾಗೂ ಟೈಲರ್ (ಬೇಸಿಕ್ ಸೂಯಿಂಗ್ ಆಪರೇಟರ್) ಪುಸ್ತಕಗಳನ್ನು ಅನುವಾದಗೊಳಿಸುವ ಕಾರ್ಯವನ್ನು ಡಾ॥ ಪ್ರಧಾನ್ ಗುರುದತ್ತ್, ಅಧ್ಯಕ್ಷರು, ಕುವೆಂಪು ಭಾಷಾ ಭಾರತಿ ಪ್ರಾಧಿಕಾರ, ಬೆಂಗಳೂರು ಇವರು ಅನುವಾದಗೊಳಿಸಿ, ಸಾಫ್ಟ್ ಕಾಪಿಯನ್ನು ನೀಡುವುದಾಗಿ ತಿಳಿಸಿರುತ್ತಾರೆ ಎಂದು, ಸಾಫ್ಟ್ ಕಾಪಿಯನ್ನು NIMI Chennai ರವರಿಗೆ ನೀಡಿ ಇವರು ಮುದ್ರಣ ಕಾರ್ಯವನ್ನು ನಡೆಸಲು ಕೋರಲಾಗುವುದು ಎಂದು ತಿಳಿಸಿರುವರು. ಅಲ್ಲದೆ ಈ ಸಂಬಂಧ ಪ್ರಾಧಿಕಾರದ ಅಧ್ಯಕ್ಷರು ಪಠ್ಯ ಪುಸ್ತಕದ ಅನುವಾದ ಕಾರ್ಯಕ್ಕೆ ಅಂದಾಜು ವೆಚ್ಚ ರೂ. 15,00,000/– ತಗಲುವುದೆಂದು ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ ಎಂದು ತಿಳಿಸುತ್ತಾ ಈ ಕೆಳಕಂಡ ಅಂಶಗಳ ಕುರಿತು ಸರ್ಕಾರಿ ಆದೇಶ ಹೊರಡಿಸುವಂತೆ ಕೋರಿರುವರು.

1. ಪುಸ್ತಕಗಳನ್ನು ಅನುವಾದಗೊಳಿಸುವ ಕಾರ್ಯಕ್ಕೆ ತಗಲುವ ವೆಚ್ಚವನ್ನು ಕರ್ನಾಟಕ ವೃತ್ತಿ ತರಬೇತಿ ಮತ್ತು ಕೌಶಲ್ಯ ಅಭಿವೃದ್ಧಿ ನಿಗಮ ನಿಯಮಿತ ಅಡಿಯಲ್ಲಿ ಬಿಡುಗಡೆಗೊಳಿಸುವಂತೆ, ಹಾಗೂ NIMI ಪುಸ್ತಕಗಳನ್ನು ಕನ್ನಡ ಭಾಷೆಗೆ ಭಾಷಾಂತರಿಸಲು ಕುವೆಂಪು ಭಾಷಾ ಭಾರತಿ ಪ್ರಾಧಿಕಾರ ಬೆಂಗಳೂರು ಇವರಿಗೆ ಈ ಜವಾಬ್ದಾರಿಯನ್ನು ವಹಿಸುವುದು.
2. ಪ್ರಧಾನ ಕಾರ್ಯದರ್ಶಿ ಗಳು, ಕಾರ್ಮಿಕ ಇಲಾಖೆ ಇವರ ನೇತೃತ್ವದಲ್ಲಿ ದಿನಾಂಕ: 25–02–2013ರಂದು ನಡೆದ ಸಭೆಯ ತೀರ್ಮಾನದಂತೆ ಈ ಕೆಳಕಂಡ ಸಂಪಾದಕರ ಮಂಡಳಿಯನ್ನು ರಚಿಸುವುದು.

| | | |
|---|---|---|
| 1. | ಡಾ॥ ಪ್ರಧಾನ್ ಗುರುದತ್ತ್, ಅಧ್ಯಕ್ಷರು, ಕುವೆಂಪು ಭಾಷಾ ಭಾರತಿ ಪ್ರಾಧಿಕಾರ, ಬೆಂಗಳೂರು | ಪ್ರಧಾನ ಸಂಪಾದಕರು |
| 2. | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಕಾರ್ಮಿಕ ಇಲಾಖೆ, ಬೆಂಗಳೂರು | ಪ್ರಧಾನ ಪೋಷಕರು |
| 3. | ಡಾ॥ ಸಿದ್ದಲಿಂಗಯ್ಯ, ಅಧ್ಯಕ್ಷರು, ಪುಸ್ತಕ ಪ್ರಾಧಿಕಾರ, ಬೆಂಗಳೂರು | ಸದಸ್ಯರು |
| 4. | ಶ್ರೀ ಕೆ. ರಾಮಚಂದ್ರಪ್ಪ, ಜಂಟಿ ನಿರ್ದೇಶಕರು (ತರಬೇತಿ/ಪರೀಕ್ಷೆ), ಉದ್ಯೋಗ ಮತ್ತು ತರಬೇತಿ ಇಲಾಖೆ, ಬೆಂಗಳೂರು | ಸದಸ್ಯ ಕಾರ್ಯದರ್ಶಿ |
| 5. | ಶ್ರೀ ನಾರಾಯಣಸ್ವಾಮಿ, ರಿಜಿಸ್ಟ್ರಾರ್, ಕುವೆಂಪು ಭಾಷಾ ಭಾರತಿ ಪ್ರಾಧಿಕಾರ, ಬೆಂಗಳೂರು | ಸದಸ್ಯರು |
| 6. | ಶ್ರೀ ಹಾಲಪ್ಪ ಶೆಟ್ಟಿ ಕೆ.ಆರ್. ಉಪ ನಿರ್ದೇಶಕರು (ತರಬೇತಿ) ಉದ್ಯೋಗ ಮತ್ತು ತರಬೇತಿ ಇಲಾಖೆ, ಬೆಂಗಳೂರು | ಸದಸ್ಯರು |
| 7. | ಶ್ರೀ ಜಯಂತ ಆರ್. ಸಹಾಯಕ ನಿರ್ದೇಶಕರು (ತರಬೇತಿ) ಉದ್ಯೋಗ ಮತ್ತು ತರಬೇತಿ ಇಲಾಖೆ, ಬೆಂಗಳೂರು | ಸದಸ್ಯರು |

3. ಉದ್ದೇಶಿತ ಫಿಟ್ಟರ್, ಎಲೆಕ್ಟ್ರಿಷಿಯನ್ (ಸಿ.ಟಿ.ಎಸ್.) ಮತ್ತು ಎಂ.ಇ.ಎಸ್.ನ NIMI ಪುಸ್ತಕಗಳನ್ನು ಕನ್ನಡ ಭಾಷೆಗೆ ಭಾಷಾಂತರ ಮುಗಿಸಿ, ಸಾಫ್ಟ್ ಕಾಪಿಯನ್ನು NIMI Chennai ರವರಿಗೆ ನೀಡಿ, ಮುದ್ರಣಗೊಳಿಸುವಂತೆ ತಿಳಿಸುವುದು.

ಪ್ರಸ್ತಾವನೆಯನ್ನು ಪರಿಶೀಲಿಸಿದ ನಂತರ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಾಇ 105 ಇಟಿಐ 2013, ಬೆಂಗಳೂರು, ದಿನಾಂಕ: 03ನೇ ಏಪ್ರಿಲ್, 2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ NIMI ಪಠ್ಯ ಪುಸ್ತಕಗಳನ್ನು ಮೊದಲನೆ ಹಂತದಲ್ಲಿ ಸರಳ ಕನ್ನಡಕ್ಕೆ ಅನುವಾದಗೊಳಿಸಲು ಹಾಗೂ ಕೆಲವು ಎಂ.ಇ.ಎಸ್. ವೃತ್ತಿಗಳಾದ ಬೇಸಿಕ್ ವೆಲ್ಡಿಂಗ್ (Arc), ಬೇಸಿಕ್ ವೆಲ್ಡಿಂಗ್ (ಗ್ಯಾಸ್), ಬೇಸಿಕ್ ರೆಫ್ರಿಜರೇಷನ್ ಅಂಡ್ ಏರ್ ಕಂಡೀಷನಿಂಗ್ ಹಾಗೂ ಟೈಲರ್ (ಬೇಸಿಕ್ ಸೂಯಿಂಗ್ ಆಪರೇಟರ್) ಪುಸ್ತಕಗಳನ್ನು ಅನುವಾದಗೊಳಿಸುವ ಕಾರ್ಯಕ್ಕೆ ತಗಲುವ ವೆಚ್ಚವನ್ನು ಕರ್ನಾಟಕ ವೃತ್ತಿ ತರಬೇತಿ ಮತ್ತು ಕೌಶಲ್ಯ ಅಭಿವೃದ್ಧಿ ನಿಗಮ ನಿಯಮಿತ ಅಡಿಯಲ್ಲಿ ಬಿಡುಗಡೆಗೊಳಿಸಲು, ಹಾಗೂ NIMI ಪುಸ್ತಕಗಳನ್ನು ಕನ್ನಡ ಭಾಷೆಗೆ ಭಾಷಾಂತರಿಸಲು ಕುವೆಂಪು ಭಾಷಾ ಭಾರತಿ ಪ್ರಾಧಿಕಾರ ಬೆಂಗಳೂರು ಇವರಿಗೆ ಜವಾಬ್ದಾರಿಯನ್ನು ವಹಿಸಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಪ್ರಧಾನ ಕಾರ್ಯದರ್ಶಿಗಳು, ಕಾರ್ಮಿಕ ಇಲಾಖೆ ಇವರ ನೇತೃತ್ವದಲ್ಲಿ ದಿನಾಂಕ: 25–02–2013ರಂದು ನಡೆದ ಸಭೆಯ ತೀರ್ಮಾನದಂತೆ ಈ ಕೆಳಕಂಡ ಸಂಪಾದಕರ ಮಂಡಳಿಯನ್ನು ರಚಿಸಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

| | | |
|---|---|---|
| 1. | ಡಾ॥ ಪ್ರಧಾನ್ ಗುರುದತ್ತ್, ಅಧ್ಯಕ್ಷರು, ಕುವೆಂಪು ಭಾಷಾ ಭಾರತಿ ಪ್ರಾಧಿಕಾರ, ಬೆಂಗಳೂರು | ಪ್ರಧಾನ ಸಂಪಾದಕರು |
| 2. | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಕಾರ್ಮಿಕ ಇಲಾಖೆ, ಬೆಂಗಳೂರು | ಪ್ರಧಾನ ಪೋಷಕರು |
| 3. | ಡಾ॥ ಸಿದ್ದಲಿಂಗಯ್ಯ, ಅಧ್ಯಕ್ಷರು, ಪುಸ್ತಕ ಪ್ರಾಧಿಕಾರ, ಬೆಂಗಳೂರು | ಸದಸ್ಯರು |
| 4. | ಶ್ರೀ ಕೆ. ರಾಮಚಂದ್ರಪ್ಪ, ಜಂಟಿ ನಿರ್ದೇಶಕರು (ತರಬೇತಿ/ಪರೀಕ್ಷೆ), ಉದ್ಯೋಗ ಮತ್ತು ತರಬೇತಿ ಇಲಾಖೆ, ಬೆಂಗಳೂರು | ಸದಸ್ಯ ಕಾರ್ಯದರ್ಶಿ |
| 5. | ಶ್ರೀ ನಾರಾಯಣಸ್ವಾಮಿ, ರಿಜಿಸ್ಟ್ರಾರ್, ಕುವೆಂಪು ಭಾಷಾ ಭಾರತಿ ಪ್ರಾಧಿಕಾರ, ಬೆಂಗಳೂರು | ಸದಸ್ಯರು |

| | | |
|---|---|---|
| 6. | ಶ್ರೀ ಹಾಲಪ್ಪ ಶೆಟ್ಟಿ ಕೆ.ಆರ್. ಉಪ ನಿರ್ದೇಶಕರು (ತರಬೇತಿ) ಉದ್ಯೋಗ ಮತ್ತು ತರಬೇತಿ ಇಲಾಖೆ, ಬೆಂಗಳೂರು | ಸದಸ್ಯರು |
| 7. | ಶ್ರೀ ಜಯಂತ ಆರ್. ಸಹಾಯಕ ನಿರ್ದೇಶಕರು (ತರಬೇತಿ) ಉದ್ಯೋಗ ಮತ್ತು ತರಬೇತಿ ಇಲಾಖೆ, ಬೆಂಗಳೂರು | ಸದಸ್ಯರು |

ಮುಂದುವರೆದು, ಉದ್ದೇಶಿತ ಫಿಟ್ಟರ್, ಎಲೆಕ್ಟ್ರಿಷಿಯನ್ (ಸಿ.ಟಿ.ಎಸ್) ಮತ್ತು ಎಂ.ಇ.ಎಸ್. ನ NIMI ಪುಸ್ತಕಗಳನ್ನು ಕನ್ನಡ ಭಾಷೆಗೆ ಭಾಷಾಂತರ ಮುಗಿಸಿ, ಸಾಫ್ಟ್ ಕಾಪಿಯನ್ನು NIMI Chennai ರವರಿಗೆ ನೀಡಿ, ಮುದ್ರಣಗೊಳಿಸುವಂತೆ ತಿಳಿಸಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ನಾಗರಾಜ,**

ಪೀಠಾಧಿಕಾರಿ,

ಕಾರ್ಮಿಕ ಇಲಾಖೆ (ಉದ್ಯೋಗ ಮತ್ತು ತರಬೇತಿ)

**P.R. 486**

**SC - 50**

## ಒಳಾಡಳಿತ ಸಚಿವಾಲಯ

**ವಿಷಯ :** ನ್ಯಾಯಮೂರ್ತಿ ಶ್ರೀ ಆರ್. ಜಿ. ವೈದ್ಯನಾಥ ವಿಚಾರಣಾ ಆಯೋಗಕ್ಕೆ ಹಣ ಬಿಡುಗಡೆ ಮಾಡುವ ಬಗ್ಗೆ

**ಓದಲಾಗಿದೆ :**
1. ಅಧಿಸೂಚನೆ ಸಂಖ್ಯೆ: ಹೆಚ್‌ಡಿ 4 ಪಿಸಿಇ 2012, ದಿನಾಂಕ 09–03–2012.
2. ಅಧಿಸೂಚನೆ ಸಂಖ್ಯೆ: ಹೆಚ್‌ಡಿ 4 ಪಿಸಿಇ 2012, ದಿನಾಂಕ 30–11–2012.
3. ಕಾರ್ಯದರ್ಶಿ, ನ್ಯಾಯಮೂರ್ತಿ ಶ್ರೀ ಆರ್. ಜಿ. ವೈದ್ಯನಾಥ ವಿಚಾರಣಾ ಆಯೋಗರವರ ಪತ್ರ ಸಂಖ್ಯೆ: ಆರ್‌ಜಿವಿಸಿ ನಂ. 45/2013, ದಿನಾಂಕ: 01–04–2013.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಅಧಿಸೂಚನೆ ದಿನಾಂಕ: 02–03–2012ರಂದು ಸಿಟಿ ಸಿವಿಲ್ ನ್ಯಾಯಾಲಯ, ಬೆಂಗಳೂರು ಇಲ್ಲಿ ವಕೀಲರು, ಮಾಧ್ಯಮ ಪ್ರತಿನಿಧಿಗಳು ಮತ್ತು ಪೊಲೀಸ್ ನಡುವೆ ನಡೆದ ಘರ್ಷಣೆಯ ಕುರಿತು ಸತ್ಯಾ ಸತ್ಯತೆಯನ್ನು ತಿಳಿದುಕೊಳ್ಳಲು ನ್ಯಾಯಮೂರ್ತಿ ಶ್ರೀ ಆರ್.ಜಿ. ವೈದ್ಯನಾಥ, ನಿವೃತ್ತ ನ್ಯಾಯಾಧೀಶರು ಇವರ ನೇತೃತ್ವದಲ್ಲಿ ಏಕ ಸದಸ್ಯ ವಿಚಾರಣಾ ಆಯೋಗವನ್ನು ರಚಿಸಲಾಗಿದೆ.

ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಶ್ರೀ ಆರ್. ಜಿ. ವೈದ್ಯನಾಥ ವಿಚಾರಣಾ ಆಯೋಗದ ಅವಧಿಯನ್ನು ದಿನಾಂಕ: 09–06–2013ರವರೆಗೆ ವಿಸ್ತರಿಸಲಾಗಿದೆ.

ಮೇಲೆ (3)ರಲ್ಲಿ ಓದಲಾದ ಪತ್ರದಲ್ಲಿ ಕಾರ್ಯದರ್ಶಿ, ನ್ಯಾಯಮೂರ್ತಿ ಶ್ರೀ ಆರ್. ಜಿ. ವೈದ್ಯನಾಥ ವಿಚಾರಣಾ ಆಯೋಗ ಅವರು ರೂ. 35,00,000/–ಗಳ ಅನುದಾನ ಮಂಜೂರು ಮಾಡಲು ಕೋರಿದ್ದು, ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

### ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಡಿ 4 ಪಿಸಿಇ 2012, ಬೆಂಗಳೂರು, ದಿನಾಂಕ: 15ನೇ ಏಪ್ರಿಲ್, 2013

ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದೆ. ನ್ಯಾಯಮೂರ್ತಿ ಶ್ರೀ ಆರ್. ಜಿ. ವೈದ್ಯನಾಥ ವಿಚಾರಣಾ ಆಯೋಗಕ್ಕೆ ಸಹಾಯಕ ಸಿಬ್ಬಂದಿಯ ವೇತನ, ಪ್ರಾಸಂಗಿಕ ಖರ್ಚು–ವೆಚ್ಚ ಹಾಗೂ ಲೇಖನ ಸಾಮಗ್ರಿ, ವಕೀಲರ ಸಂಭಾವನೆ, ಇತ್ಯಾದಿಗಳ ವೆಚ್ಚ ಭರಿಸಲು ಅನುಕೂಲವಾಗುವಂತೆ 2013–2014ನೇ ಸಾಲಿಗೆ **₹ 20,00,000/– (ರೂಪಾಯಿ ಇಪ್ಪತ್ತು ಲಕ್ಷಗಳು ಮಾತ್ರ)** ಗಳನ್ನು ಲೆಕ್ಕ ಶೀರ್ಷಿಕೆ **"2070–00–105–0–02–059 ಇತರ ವಿಚಾರಣಾ ಆಯೋಗ"** ಅಡಿಯಲ್ಲಿ ಭರಿಸುವಂತೆ ಹೆಚ್ಚುವರಿ ಹಣವನ್ನು ಸರ್ಕಾರವು ಬಿಡುಗಡೆ ಮಾಡಿದೆ.

ಸದರಿ ಆಯೋಗದ ಕಾರ್ಯದರ್ಶಿಯವರು ಹಣವನ್ನು ಹಿಂತೆಗೆಯುವ ಮತ್ತು ವಿತರಿಸುವ ಅಧಿಕಾರಿಯಾಗಿ ಕರ್ತವ್ಯ ನಿರ್ವಹಿಸುವರು.

ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ:10–07–1996ರಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳಿಗೆ ನೀಡಿರುವ ಅಧಿಕಾರ ಪ್ರತ್ಯಾಯೋಜನೆ ರೀತ್ಯಾ ಈ ಆದೇಶವನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪ್ರಕಾಶ ವೈ.ಕೆ.**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಕಾನೂನು ಮತ್ತು ಸುವ್ಯವಸ್ಥೆ)

**P.R. 487**

**SC - 25**

## ಒಳಾಡಳಿತ ಸಚಿವಾಲಯ

**ವಿಷಯ :** ಸಿಟಿ ಸಿವಿಲ್ ನ್ಯಾಯಾಲಯ, ಬೆಂಗಳೂರು ಇಲ್ಲಿ ವಕೀಲರು, ಮಾಧ್ಯಮ ಪ್ರತಿನಿಧಿಗಳು ಮತ್ತು ಪೊಲೀಸ್ ನಡುವೆ ನಡೆದ ಘರ್ಷಣೆ ಕುರಿತು ನ್ಯಾಯಮೂರ್ತಿ ಶ್ರೀ ಆರ್.ಜಿ. ವೈದ್ಯನಾಥ ವಿಚಾರಣಾ ಆಯೋಗದ ಮುಂದೆ ಸರ್ಕಾರದ ಪರವಾಗಿ ವಾದ ಮಂಡಿಸಿದ ಶ್ರೀ ಜಿ.ಕೆ. ಬೇಕಲ್ ವಕೀಲರು, (ನಿವೃತ್ತ ಉಪ ಪೊಲೀಸ್ ಆಯುಕ್ತರು) ಬೆಂಗಳೂರು ಇವರಿಗೆ ಸಂಭಾವನೆ ಮಂಜೂರು ಮಾಡುವ ಕುರಿತು.

**ಓದಲಾಗಿದೆ :** 1. ಸರ್ಕಾರದ ಅಧಿಸೂಚನೆ ಸಂಖ್ಯೆ: ಹೆಚ್‌ಡಿ 4 ಪಿಸಿಇ 2012, ದಿನಾಂಕ 09–03–2012.

2. ದಿನಾಂಕ: 13–08–2012ರ ಸರ್ಕಾರದ ಅಧಿಸೂಚನೆ ಸಂಖ್ಯೆ: ಹೆಚ್‌ಡಿ 11 ಪಿಸಿಇ 2012.

3. ಶ್ರೀ ಜಿ.ಕೆ. ಬೇಕಲ್, ವಕೀಲರು, ನಿವೃತ್ತ ಉಪ ಪೊಲೀಸ್ ಆಯುಕ್ತರು, ಬೆಂಗಳೂರು ಇವರ ಮನವಿ ದಿನಾಂಕ: 02–03–2013 ಹಾಗೂ 02–04–2013

**ಪ್ರಸ್ತಾವನೆ:**

ದಿನಾಂಕ: 02–03–2012ರಂದು ಬೆಂಗಳೂರು ನಗರದ ಸಿವಿಲ್ ನ್ಯಾಯಾಲಯದ ಆವರಣದಲ್ಲಿ ವಕೀಲರು, ಮಾಧ್ಯಮ ಪ್ರತಿನಿಧಿಗಳು ಮತ್ತು ಪೊಲೀಸ್ ನಡುವೆ ನಡೆದ ಘಟನೆಯ ಕುರಿತು ಕೂಲಂಕಷವಾಗಿ ತನಿಖೆ ನಡೆಸಲು ನ್ಯಾಯಮೂರ್ತಿ ಶ್ರೀ ಆರ್.ಜಿ. ವೈದ್ಯನಾಥ ಆಯೋಗವನ್ನು ಮೇಲೆ ಓದಲಾದ (1)ರ ಆದೇಶದಲ್ಲಿ ನೇಮಿಸಲಾಗಿದೆ.

ಶ್ರೀ ಜಿ.ಕೆ. ಬೇಕಲ್, ವಕೀಲರು, (ನಿವೃತ್ತ ಉಪ ಪೊಲೀಸ್ ಆಯುಕ್ತರು) ಬೆಂಗಳೂರು ಅವರನ್ನು ನ್ಯಾಯಮೂರ್ತಿ ಶ್ರೀ ಆರ್.ಜಿ. ವೈದ್ಯನಾಥ ವಿಚಾರಣಾ ಆಯೋಗದ ಮುಂದೆ ಸರ್ಕಾರದ ಪರವಾಗಿ ವಾದಿಸಲು ಮೇಲೆ ಓದಲಾದ (2)ರ ಆದೇಶದಲ್ಲಿ ನೇಮಕ ಮಾಡಲಾಗಿದೆ.

ಶ್ರೀ ಜಿ.ಕೆ. ಬೇಕಲ್, ವಕೀಲರು, ಬೆಂಗಳೂರು ಇವರು ಸರ್ಕಾರದ ಪರವಾಗಿ ದಿನಾಂಕ: 04–02–2013, 06–02–2013, 07–02–2013, 12–02–2013, 13–02–2013, 14–02–2013, 21–02–2013, 22–02–2013, 27–02–2013, ಮತ್ತು 28–02–2013 ರಂದು ವಾದಿಸಿದ ಸಲುವಾಗಿ ಸಂಭಾವನೆಯಾಗಿ ಒಟ್ಟು ₹ 96,000/– (ತೊಂಬತ್ತಾರು ಸಾವಿರಗಳು ಮಾತ್ರ)ಗಳ ಮೊತ್ತವನ್ನು ಹಾಗೂ 01–03–2013, 07–03–2013, 08–03–2013, 11–03–2013, 12–03–2013, 21–03–2013, 22–03–2013, 23–03–2013, 26–03–2013 ಹಾಗೂ 27–03–2013ರಂದು ವಾದಿಸಿದ ಸಲುವಾಗಿ ಸಂಭಾವನೆಯಾಗಿ ಒಟ್ಟು ₹ 96,000/– (ತೊಂಬತ್ತಾರು ಸಾವಿರಗಳು ಮಾತ್ರ)ಗಳ ಮೊತ್ತವನ್ನು ಮಂಜೂರು ಮಾಡುವಂತೆ ಮೇಲೆ ಓದಲಾದ (3)ರ ಪತ್ರಗಳಲ್ಲಿ ಕೋರಿರುತ್ತಾರೆ.

ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಡಿ 11 ಪಿಸಿಇ 2012, ಬೆಂಗಳೂರು, ದಿನಾಂಕ: 10ನೇ ಏಪ್ರಿಲ್, 2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಜಿ.ಕೆ. ಬೇಕಲ್, ವಕೀಲರು, (ನಿವೃತ್ತ ಉಪ ಪೊಲೀಸ್ ಆಯುಕ್ತರು), ಬೆಂಗಳೂರು ಇವರಿಗೆ ಈ ಕೆಳಕಂಡಂತೆ ಸಂಭಾವನೆಯನ್ನು ಮಂಜೂರು ಮಾಡಲಾಗಿದೆ.

| ಕ್ರ.ಸಂ. | ಸಂಭಾವನೆಯ ವಿವರ | ಮೊತ್ತ |
|---|---|---|
| 1 | Effective hearing (11 days) dated, 04-02-2013, 06-02-2013, 12-02-2013, 13-02-2013, 14-02-2013, 21-02-2013, 22-02-2013, 27-02-2013, & 28-02-2013 @ ₹ 10,000 per day | ₹ 90,000/- |
| 2 | Non-effective hearing one day 07-02-2013 @ ₹ 6,000 per day | ₹ 6,000/- |
| | **ಮೊತ್ತ (ತೊಂಬತ್ತಾರು ಸಾವಿರಗಳು ಮಾತ್ರ)** | **₹ 96,000/-** |
| 3 | Effective hearing (11 days) dated, 01-03-2013, 07-03-2013, 08-03-2013, 11-03-2013, 12-03-2013, 22-03-2013, 23-03-2013, 26-03-2013 & 27/3/2013 @ ₹ 10,000 per day | ₹ 90,000/- |
| 4 | Non-effective hearing one day 21-03-2013 @ ₹ 6,000 per day | ₹ 6,000/- |
| | **ಮೊತ್ತ (ತೊಂಬತ್ತಾರು ಸಾವಿರಗಳು ಮಾತ್ರ)** | **₹ 96,000/-** |
| | **ಒಟ್ಟು ಮೊತ್ತ (ಒಂದು ಲಕ್ಷದ ತೊಂಬತ್ತೆರಡು ಸಾವಿರಗಳು ಮಾತ್ರ)** | **₹ 1,92,000/-** |

1. ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ **"2070–00–105–0–02–059 ವಿಶೇಷ ತನಿಖಾ ಆಯೋಗಗಳು"** ಅಡಿಯಲ್ಲಿ ಭರಿಸತಕ್ಕದ್ದು. ಸದರಿ ಲೆಕ್ಕ ಶೀರ್ಷಿಕೆಯಡಿಯಲ್ಲಿ ಬಿಡುಗಡೆಯಾದ ಹಣವನ್ನು ಹಿಂಪಡೆದು ವಿತರಿಸಲು ಸರ್ಕಾರದ ಅಧೀನ ಕಾರ್ಯದರ್ಶಿ (ಕಾನೂನು ಮತ್ತು ಸುವ್ಯವಸ್ಥೆ), ಒಳಾಡಳಿತ ಇಲಾಖೆ ಇವರನ್ನು ಹಣ ಹಿಂಪಡೆಯುವ ಮತ್ತು ವಿತರಿಸುವ ಅಧಿಕಾರಿಯನ್ನಾಗಿ ನೇಮಿಸಲಾಗಿದೆ.
2. ಈ ಆದೇಶವನ್ನು ಆರ್ಥಿಕ ಇಲಾಖೆ ಆದೇಶ ಸಂಖ್ಯೆ: ಆಇ 3 ಟಿಎಫ್‌ಪಿ 2011, ದಿನಾಂಕ: 27–01–2012ರಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು/ಕಾರ್ಯದರ್ಶಿಗಳಿಗೆ ಅಧಿಕಾರ ಪ್ರತ್ಯಾಯೋಜಿಸಿದ ರೀತ್ಯಾ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪ್ರಕಾಶ ವೈ.ಕೆ.**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಕಾನೂನು ಮತ್ತು ಸುವ್ಯವಸ್ಥೆ)

**P.R. 488**

**SC - 50**

## ಕಂದಾಯ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಕಂಇ 96 ಮುಆಬಿ 2012, ಬೆಂಗಳೂರು, ದಿನಾಂಕ: 11ನೇ ಅಕ್ಟೋಬರ್, 2012**

ಬೆಂಗಳೂರಿನ ಸಂಪಂಗಿರಾಮನಗರದಲ್ಲಿರುವ ಶ್ರೀ ಪ್ರಸನ್ನ ಗಣೇಶ ಮತ್ತು ಶ್ರೀ ವೆಂಕಟರಮಣಸ್ವಾಮಿ ದೇವಾಲಯದಲ್ಲಿ ಹಣ ದುರುಪಯೋಗವಾಗುತ್ತಿರುವುದಾಗಿ ಸ್ವೀಕರಿಸಿದ ದೂರಿನ ಹಿನ್ನೆಲೆಯಲ್ಲಿ ವಿಶೇಷ ಜಿಲ್ಲಾಧಿಕಾರಿ, ಬೆಂಗಳೂರು ನಗರ, ಇವರು ತನಿಖೆ ನಡೆಸಿ ಸಲ್ಲಿಸಿರುವ ವರದಿ ಪ್ರಕಾರ ಈ ಕೆಳಕಂಡ ಪ್ರಮುಖ ಆರೋಪಗಳು ಸಾಬೀತಾಗಿರುತ್ತವೆ:

1. ಸಿಬ್ಬಂದಿಗೆ ಯಾವುದೇ ನೇಮಕಾತಿ ಆದೇಶ ನೀಡದಿರುವುದು ಹಾಜರಾತಿ ವಹಿ ನಿರ್ವಹಿಸದಿರುವುದು.
2. ದೇವಾಲಯದಲ್ಲಿ ಅಳವಡಿಸಿರುವ ಹುಂಡಿಗಳಿಂದ ಬಂದಿರುವ ಆದಾಯದ ಬಗ್ಗೆ ಯಾವುದೇ ದಾಖಲೆ ನಿರ್ವಹಿಸದೇ ಹಣವನ್ನು ದುರುಪಯೋಗಪಡಿಸಿಕೊಂಡಿರುವುದು.
3. ದೇವಾಲಯಕ್ಕೆ ಬರುವ ಕಲ್ಯಾಣ ಮಂಟಪದ ಮತ್ತು ಅಂಗಡಿಗಳ ಬಾಡಿಗೆ ಹಣದ ನಿರ್ವಹಣೆ ಬಗ್ಗೆ ಯಾವುದೇ ದಾಖಲೆ ನಿರ್ವಹಿಸದೆ ಇರುವುದು.
4. ದೇವಾಲಯಕ್ಕೆ ಬರುವ ಆದಾಯ ಮತ್ತು ವೆಚ್ಚಗಳಿಗೆ ಸೂಕ್ತ ಲೆಕ್ಕಪತ್ರಗಳನ್ನು ನಿರ್ವಹಿಸಿ, ಆಡಿಟ್ ಮಾಡಿಸಿ ಲೆಕ್ಕವನ್ನು ಸಮರ್ಪಕವಾಗಿ ನಿರ್ವಹಿಸದಿರುವುದು.
5. ದೇವಾಲಯಕ್ಕೆ ಭಕ್ತಾಧಿಗಳಿಂದ ಈವರೆಗೆ ಬಂದಿರುವ ಚಿನ್ನ, ಬೆಳ್ಳಿ, ಹಿತ್ತಾಳೆ, ಸ್ಟೀಲ್, ಇನ್ನಿತರ ವಸ್ತುಗಳ ವಿವರದ ದಾಸ್ತಾನು ವಹಿ ನಿರ್ವಹಿಸದೇ ಸಮರ್ಪಕವಾದ ನಿರ್ವಹಣೆ ಇಲ್ಲದಿರುವುದು.
6. ಸಾರ್ವಜನಿಕರಿಂದ ಅಪಾರ ಪ್ರಮಾಣದ ದೇಣಿಗೆ ಸಂಗ್ರಹಿಸಿದ್ದರೂ ಸೂಕ್ತ ಲೆಕ್ಕಪತ್ರಗಳನ್ನು ನಿರ್ವಹಿಸದಿರುವುದು.
7. ದೇವಾಲಯ ಹಾಗೂ ಕಲ್ಯಾಣಮಂಟಪ ನಿರ್ಮಿಸಿರುವ ಜಾಗವು ಬಿ.ಬಿ.ಎಂ.ಪಿ. ಸ್ವತ್ತಾಗಿದ್ದರೂ ಸಹ ಯಾವುದೇ ಅನುಮತಿ ಪಡೆಯದೆ 1977ರಲ್ಲಿ ಸಾರ್ವಜನಿಕರಿಂದ, ಭಕ್ತಾಧಿಗಳಿಂದ ಸಾರ್ವಜನಿಕರಿಂದ ದೂರುಗಳು ಬಂದ ನಂತರ ದೇವಾಲಯ ನಿರ್ಮಿಸಿರುವ ಜಾಗವನ್ನು ದಿನಾಂಕ: 07–05–2011ರಂದು ಪೂರ್ವಾನ್ವಯವಾಗಿ ಗುತ್ತಿಗೆ ಪಡೆದಿರುವುದು.

ಸದರಿ ದೇವಸ್ಥಾನದ ಟ್ರಸ್ಟ್‌ನ ಕೆಲವು ಸದಸ್ಯರು ದಿನಾಂಕ: 28–05–2012ರಂದು ಮನವಿ ಸಲ್ಲಿಸುತ್ತಾ ದೇವಾಲಯವನ್ನು ಸರ್ಕಾರದ ವಶಕ್ಕೆ ತೆಗೆದುಕೊಳ್ಳುವಂತೆ ಕೋರಿರುತ್ತಾರೆ.

ದಿನಾಂಕ: 07–08–2012ರಂದು ನಡೆದ ರಾಜ್ಯ ಧಾರ್ಮಿಕ ಪರಿಷತ್ತಿನ ಸಭೆಯಲ್ಲಿ ಚರ್ಚಿಸಲಾಗಿ ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಅಧಿನಿಯಮ 1997ರ ಕಲಂ 42 ಮತ್ತು 43ರನ್ವಯ ಘೋಷಿತ ಸಂಸ್ಥೆ ಎಂದು ಘೋಷಿಸಲು ನಿರ್ಣಾಯಿಸಲಾಗಿದೆ.

ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಅಧಿನಿಯಮ (1997)ರ ಕಲಂ 23(ಎ)ರಡಿ ಪ್ರದತ್ತವಾದ ಅಧಿಕಾರ ಚಲಾಯಿಸಿ ಬೆಂಗಳೂರು ನಗರದ ಸಂಪಂಗಿರಾಮನಗರದಲ್ಲಿರುವ ಶ್ರೀ ಪ್ರಸನ್ನ ಗಣೇಶ ಮತ್ತು ಶ್ರೀ ವೆಂಕಟರಮಣಸ್ವಾಮಿ ದೇವಾಲಯವನ್ನು ಸದರಿ ಅಧಿನಿಯಮದ ಕಲಂ 42 ಮತ್ತು 43ರ ಮೇರೆಗೆ ಅಧಿಸೂಚಿತ ಧಾರ್ಮಿಕ ಸಂಸ್ಥೆಗಳ ಪಟ್ಟಿಗೆ ಸೇರಿಸಲು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ.ವಿ. ಶ್ರೀನಿವಾಸ ದೀಕ್ಷಿತ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಮುಜರಾಯಿ)

**P.R. 489**
**SC - 25**

## ಕಂದಾಯ ಸಚಿವಾಲಯ

### ತಿದ್ದುಪಡಿ

### ಸಂಖ್ಯೆ: ಕಂಇ 06 ಎಲ್‌ಜಿಎಸ್ 2013, ಬೆಂಗಳೂರು, ದಿನಾಂಕ: 25–03–2013

ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 06 ಎಲ್‌ಜಿಎಸ್ 2013 ದಿನಾಂಕ: 13–03–2013ರ ಆದೇಶ ಭಾಗದ 06 ಮತ್ತು 07ನೇ ಸಾಲಿನಲ್ಲಿರುವ "ಕರ್ನಾಟಕ ಭೂ–ಕಂದಾಯ ಕಾಯ್ದೆ 1964ರ ಕಲಂ 71ರಡಿಯಲ್ಲಿ ಕಾಯ್ದಿರಿಸಿ" ಎಂಬುದಕ್ಕೆ ಬದಲಾಗಿ "ಕರ್ನಾಟಕ ಭೂ ಕಂದಾಯ ಕಾಯ್ದೆ 1964ರ ಕಲಂ 69 ರಡಿಯಲ್ಲಿ" ಎಂಬುದಾಗಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಉಮಾದೇವಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಭೂ ಮಂಜೂರಾತಿ–1)

**P.R. 493**
**SC - 150**

## ಕಂದಾಯ ಸಚಿವಾಲಯ

### ತಿದ್ದುಪಡಿ

### ಸಂಖ್ಯೆ: ಆರ್‌ಡಿ 44 ಎಲ್‌ಜಿಪಿ 2012, ಬೆಂಗಳೂರು, ದಿನಾಂಕ: 27–03–2013

ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 44 ಎಲ್‌ಜಿಪಿ 2012, ದಿನಾಂಕ: 28–12–2012ರ ಆದೇಶ ಭಾಗದ ಐದನೇ ಸಾಲಿನಲ್ಲಿ "ಸ.ನಂ. 87/68" ಎಂದು ನಮೂದಾಗಿದ್ದು, ಇದಕ್ಕೆ ಬದಲಾಗಿ "ಸ.ನಂ. 87/18" ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಉಮಾದೇವಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಭೂ–ಮಂಜೂರಾತಿ–1)

**P.R. 494**
**SC - 150**

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ:** ಕೇಂದ್ರ ಸರ್ಕಾರದ ಗ್ರಾಮೀಣಾಭಿವೃದ್ಧಿ ಮಂತ್ರಾಲಯವು 2012–13 ನೇ ಸಾಲಿಗೆ ಡಿಆರ್‌ಡಿಎ ಆಡಳಿತ ಯೋಜನೆಯಡಿ ರಾಜ್ಯದ 6 ಜಿಲ್ಲಾ ಪಂಚಾಯತಿಗಳಿಗೆ ಬಿಡುಗಡೆ ಮಾಡಿದ ಅನುದಾನಕ್ಕನುಗುಣವಾಗಿ 1/2ನೇ ಕಂತಿನ ರಾಜ್ಯದ ಪಾಲಿನ ಅನುದಾನವನ್ನು ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**

1. ಕೇಂದ್ರ ಸರ್ಕಾರದ ಪತ್ರ ಸಂಖ್ಯೆ:ಆರ್–17014/01/2012–13 ಡಿಆರ್‌ಡಿಎ(ಎಸ್‌ಎಲ್ ನಂ.10) ದಿನಾಂಕ 21–05–2012.
2. ಸರ್ಕಾರದ ಆದೇಶ ಸಂಖ್ಯೆ:ಗ್ರಾಅಪ 2 ಎಸ್‌ಜೆವೈ (ಡಿಆರ್‌ಡಿಎ) 2011, ಬೆಂಗಳೂರು, ದಿನಾಂಕ 07–06–2012 ಮತ್ತು 17–09–2012.
3. ಸರ್ಕಾರದ ಆದೇಶ ಸಂಖ್ಯೆ :ಗ್ರಾಅಪ 4 ಎಸ್‌ಜೆವೈ (ಡಿಆರ್‌ಡಿಎ) 2012, ಬೆಂಗಳೂರು, ದಿನಾಂಕ: 17–09–2012, 11.10.2012, 26.11.2012 ಮತ್ತು 6.12.2012
4. ಕೇಂದ್ರ ಸರ್ಕಾರದ ಪತ್ರ ಸಂಖ್ಯೆ: ಆರ್–17014/11/: 2012–13 ಡಿಆರ್‌ಡಿಎ(ಎಸ್‌ಎಲ್ ನಂ.41) ದಿನಾಂಕ 24–08–2012 ಮತ್ತು [ಎಸ್‌ಎಲ್ ನಂ.48] ದಿನಾಂಕ 15.11.2012
5. ಕೇಂದ್ರ ಸರ್ಕಾರದ ಪತ್ರ ಸಂಖ್ಯೆ : ಆರ್–17014/11/: 2012–13 ಡಿಆರ್‌ಡಿಎ (ಎಸ್‌ಎಲ್‌ನಂ.75) ದಿನಾಂಕ 16.01.2013.

**ಪ್ರಸ್ತಾವನೆ:**

ಡಿಆರ್‌ಡಿಎ ಆಡಳಿತ ಯೋಜನೆಯು ಕೇಂದ್ರ ಪುರಸ್ಕೃತ ಯೋಜನೆಯಾಗಿದ್ದು, ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು 75:25ರ ಅನುಪಾತದಲ್ಲಿ ಭರಿಸುತ್ತವೆ. 2012–13 ನೇ ಸಾಲಿಗೆ ಕೇಂದ್ರ ಗ್ರಾಮೀಣಾಭಿವೃದ್ಧಿ ಮಂತ್ರಾಲಯವು ರಾಜ್ಯದ 22 ಜಿಲ್ಲಾ ಪಂಚಾಯತಿಗಳಿಗೆ ಡಿಆರ್‌ಡಿಎ ಆಡಳಿತ ಯೋಜನೆಯಡಿ ಓದಲಾಗಿದೆ (1) ಮತ್ತು (4)ರ ಪತ್ರಗಳಲ್ಲಿ ಒಂದನೇ ಕಂತಿನ ಅನುದಾನ ರೂ.7,81,05,000/– ಬಿಡುಗಡೆ ಮಾಡಿದೆ. ಇದಕ್ಕನುಗುಣವಾಗಿ ರಾಜ್ಯ ಸರ್ಕಾರವು ತನ್ನ ಪಾಲಿನ ಒಂದನೇ ಕಂತಿನ ಅನುದಾನ ರೂ.2,60,34,000/–ಗಳನ್ನು ಓದಲಾಗಿದೆ (3)ರ ಆದೇಶಗಳಲ್ಲಿ ಬಿಡುಗಡೆ ಮಾಡಿದೆ.

ಓದಲಾಗಿದೆ (5) ರ ಆದೇಶದಲ್ಲಿ ಕೇಂದ್ರ ಗ್ರಾಮೀಣಾಭಿವೃದ್ಧಿ ಮಂತ್ರಾಲಯವು 2012–13 ನೇ ಸಾಲಿಗೆ ಒಂದನೇ / ಎರಡನೇ ಕಂತಿನ ಅನುದಾನವಾಗಿ 6 ಜಿಲ್ಲಾ ಪಂಚಾಯತಿಗಳಿಗೆ ಒಟ್ಟು ರೂ.1,70,08,000 ಗಳನ್ನು ಬಿಡುಗಡೆ ಮಾಡಿದೆ. ಇದಕ್ಕನುಗುಣವಾಗಿ ರಾಜ್ಯದ ಪಾಲಿನ ಒಂದನೇ/ ಎರಡನೇ ಕಂತಿನ ಅನುದಾನವಾಗಿ ಸದರಿ 6 ಜಿಲ್ಲಾ ಪಂಚಾಯತಿಗಳಿಗೆ ರೂ.56,71,000 ಗಳನ್ನು ಬಿಡುಗಡೆ ಮಾಡಬೇಕಾಗಿದೆ. ಆದುದರಿಂದ ಈ ಆದೇಶ :

**ಸರ್ಕಾರದ ಆದೇಶ ಸಂಖ್ಯೆ : ಗ್ರಾಅಪ 4 ಎಸ್‌ಜೆವೈ (ಡಿಆರ್‌ಡಿಎ) 2012, ಬೆಂಗಳೂರು, ದಿನಾಂಕ: 12.02.2013**

ರಾಜ್ಯ ಸರ್ಕಾರವು, ಡಿಆರ್‌ಡಿಎ ಆಡಳಿತ ಯೋಜನೆಯಡಿ 2012–13 ನೇ ಸಾಲಿನಲ್ಲಿ ಒಂದನೇ/ಎರಡನೇ ಕಂತಿನ ಅನುದಾನವಾಗಿ 6 ಜಿಲ್ಲಾ ಪಂಚಾಯತಿಗಳಿಗೆ ಒಟ್ಟು ರೂ.56,71,000/– ಗಳನ್ನು (ಐವತ್ತಾರು ಲಕ್ಷದ ಎಪ್ಪತ್ತೊಂದು ಸಾವಿರ ರೂಪಾಯಿಗಳು ಮಾತ್ರ) ಕೆಳಕಂಡ ಷರತ್ತುಗೊಳಪಟ್ಟು ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

(ರೂ.ಗಳಲ್ಲಿ)

| ಕ್ರ.ಸಂ. | ಜಿಲ್ಲಾ ಪಂಚಾಯತಿಯ ಹೆಸರು | ಜಿಲ್ಲಾ ಕೋಡ್ | ಡಿ.ಡಿ.ಓ ಕೋಡ್ | 2012–13 ನೇ ಸಾಲಿನಲ್ಲಿ ಕೇಂದ್ರ ಸರ್ಕಾರ ಬಿಡುಗಡೆ ಮಾಡಿದ ಒಂದನೇ /ಎರಡನೇ ಕಂತಿನ ಅನುದಾನ | ಇದಕ್ಕನುಗುಣವಾಗಿ ರಾಜ್ಯ ಸರ್ಕಾರವು ಬಿಡುಗಡೆ ಮಾಡುತ್ತಿರುವ ಒಂದನೇ / ಎರಡನೇ ಕಂತಿನ ಅನುದಾನ |
|---|---|---|---|---|---|
| 1 | 2 | 3 | 4 | 5 | 6 |
| 1 | ಚಾಮರಾಜನಗರ [1ನೇ ಕಂತು] | 456 | 1000ZZ0001 | 31,40,000 | 10,47,000 |
| 2 | ಕೋಲಾರ [1ನೇ ಕಂತು] | 404 | 0700ZZ8002 | 31,40,000 | 10,47,000 |
| 3 | ಕೊಡಗು [1ನೇ ಕಂತು] | 411 | 1200ZZ0001 | 31,40,000 | 10,47,000 |
| 4 | ಯಾದಗಿರಿ [1ನೇ ಕಂತು] | 421 | 3300ZZ0001 | 31,40,000 | 10,47,000 |
| 5 | ಉತ್ತರ ಕನ್ನಡ [1ನೇ ಕಂತು] | 416 | 3000ZZ0080 | 29,16,000 | 9,72,000 |
| | ಧಾರವಾಡ [2ನೇ ಕಂತು] | 415 | 2500ZZ8798 | 15,32,000 | 5,11,000 |
| | | | **ಒಟ್ಟು** | **1,70,08,000** | **56,71,000** |

**ಷರತ್ತುಗಳು :**

ಡಿಆರ್‌ಡಿಎ ಆಡಳಿತ ಯೋಜನೆಯ ಕೈಪಿಡಿಯ ಮಾರ್ಗಸೂಚಿಯಂತೆ ಈ ಆದೇಶದಲ್ಲಿ ಬಿಡುಗಡೆ ಮಾಡಿದ ಅನುದಾನವನ್ನು ಜಿಲ್ಲಾ ಪಂಚಾಯತ್ ಸಿಬ್ಬಂದಿಗಳ ವೇತನ ಹಾಗೂ ಸಾದಿಲ್ವಾರು ವೆಚ್ಚಗಳಿಗೆ ಮಾತ್ರ ಉಪಯೋಗಿಸಲು ಅವಕಾಶವಿದೆ. ಕೇಂದ್ರ ಹಾಗೂ ರಾಜ್ಯದ ಪಾಲಿನ ಅನುದಾನವನ್ನು ಸೇರಿ ವೆಚ್ಚವನ್ನು ಭರಿಸಬೇಕಾಗಿರುವುದರಿಂದ ರಾಜ್ಯದ ಪಾಲಿನ ಅನುದಾನವನ್ನು ವೇತನ ಮತ್ತು ವೇತನೇತರವೆಂದು ವಿಂಗಡಿಸದೆ ಒಟ್ಟಾರೆ ರಾಜ್ಯದ ಪಾಲಿನ ಅನುದಾನವನ್ನು ಖಜಾನೆಯಿಂದ ಡ್ರಾ ಮಾಡಲು ಖಜಾನಾಧಿಕಾರಿಗಳು ಅನುಮತಿ ನೀಡತಕ್ಕದ್ದು.

ಯೋಜನೆಯ ವೆಚ್ಚವನ್ನು ಲೆಕ್ಕ ಶೀರ್ಷಿಕೆ : "2515 ಇತರೆ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳು 00–196–ಜಿಲ್ಲಾ ಪಂಚಾಯತ್‌ಗಳಿಗೆ ಸಹಾಯ–6–ಜಿಲ್ಲಾ ಪಂಚಾಯತ್–06–ಡಿಆರ್‌ಡಿಎ ಆಡಳಿತಾತ್ಮಕ ವೆಚ್ಚ– (ಕೇಂದ್ರ ಪುರಸ್ಕೃತ ಯೋಜನೆ) 2012–2013 ಲಿಂಕ್ ಕೋಡ್ 2515–00–196–

6–06" (ಹೊಸ ಜಿಲ್ಲಾ ಪಂಚಾಯತ್ ಕೋಡ್ 2515–00–101–0–01) ರಡಿ ಸರ್ಕಾರದ ತಿದ್ದುಪಡಿ ಆದೇಶ ಸಂಖ್ಯೆ ಎಫ್‌ಡಿ 1 ಜಡ್‌ಪಿಎ 2007 (ಪಿ2) ದಿನಾಂಕ 26–04–2007 ರನ್ವಯ ಜಿಲ್ಲಾ ಪಂಚಾಯತ್ ನಿಧಿ–1ಕ್ಕೆ ಜಮೆ ಮಾಡಿಕೊಂಡು ಆರ್ಥಿಕ ಇಲಾಖೆ (ವೆಚ್ಚ–6) ಯ ಸಂಖ್ಯೆ ಆಇ 172 ವೆಚ್ಚ–6/2011 ದಿನಾಂಕ 30–03–2011 ರ ಸಹಮತಿಯಂತೆ ಪೇಯಿಸ್ ರಸೀದಿಯ ಮೂಲಕ ಜಿಲ್ಲಾ ಪಂಚಾಯತಿ ನಿಧಿಯಿಂದ ಅನುದಾನವನ್ನು ಖಜಾನೆಯಿಂದ ಪಡೆದುಕೊಂಡು ಕಾರ್ಯಕ್ರಮದ ಅನುಷ್ಠಾನಕ್ಕಾಗಿ ತೆರೆದಿರುವ ಬ್ಯಾಂಕ್ ಖಾತೆಗೆ ಜಮೆ ಮಾಡಿಕೊಂಡು ವೆಚ್ಚವನ್ನು ಭರಿಸತಕ್ಕದ್ದು.

ಸಂಬಂಧಿಸಿದ ಜಿಲ್ಲಾ ಪಂಚಾಯತಿಗಳ ಮುಖ್ಯ ಲೆಕ್ಕಾಧಿಕಾರಿಗಳಿಗೆ ಅನುದಾನವನ್ನು ಖಜಾನೆಯಿಂದ ಸೆಳೆಯಲು ಕಾನೂನು ರೀತ್ಯ ಅಧಿಕಾರ ನೀಡಲಾಗಿದೆ.

ಈ ಆದೇಶದಲ್ಲಿ ಬಿಡುಗಡೆ ಮಾಡಿದ ಅನುದಾನದ ಆಂತರಿಕ ಲೆಕ್ಕ ಪರಿಶೋಧನೆಯನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಮಾಡುವುದು.

ಸಂಬಂಧಿಸಿದ ಜಿಲ್ಲಾ ಪಂಚಾಯತಿಗಳ ಮುಖ್ಯ ಲೆಕ್ಕಾಧಿಕಾರಿಗಳು, ಆಯಾ ತಿಂಗಳ ಪ್ರಗತಿ ವರದಿ ಹಾಗೂ ಹುದ್ದೆವಾರು ವಿವರಗಳನ್ನು ಮುಂದಿನ ತಿಂಗಳ 5ನೇ ತಾರೀಖಿನೊಳಗೆ ನಿರ್ದೇಶಕರು {ಸ್ವಉಕಾ} ಹಾಗೂ ಪ.ನಿ.ಸರ್ಕಾರದ ಉಪ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಬಹುಮಹಡಿ ಕಟ್ಟಡ, ಬೆಂಗಳೂರು ಇವರಿಗೆ ತಪ್ಪದೇ ಕಳುಹಿಸುವುದು.

ಸಂಬಂಧಿಸಿದ ಜಿಲ್ಲಾ ಪಂಚಾಯತಿಗಳ ಮುಖ್ಯ ಲೆಕ್ಕಾಧಿಕಾರಿಗಳು ಹಣ ಉಪಯೋಗ ಪ್ರಮಾಣ ಪತ್ರ ಹಾಗೂ ಲೆಕ್ಕ ಪರಿಶೋಧನಾ ವರದಿಗಳನ್ನು, ನಿರ್ದೇಶಕರು {ಸ್ವಉಕಾ} ಹಾಗೂ ಪದ ನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಬಹುಮಹಡಿ ಕಟ್ಟಡ, ಬೆಂಗಳೂರು ಇವರಿಗೆ ತಪ್ಪದೇ ಕಳುಹಿಸುವುದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಕರ್ನಾಟಕ ಸರ್ಕಾರ ಇವರ ಸಹಮತಿ ಸಂಖ್ಯೆ:ಗ್ರಾಅಪ 84 ಪಿಬಿಎಸ್ 2013 ದಿನಾಂಕ: 07.02.2013ರಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ದೀಪ**

ನಿರ್ದೇಶಕರು (ಸ್ವಉಕಾ)

ಹಾಗೂ ಪ.ನಿ. ಸರ್ಕಾರದ ಉಪ ಕಾರ್ಯದರ್ಶಿ,

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

**PR.474**

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ:** ಕರ್ನಾಟಕ ರಾಜ್ಯ ಗ್ರಾಮೀಣ ಜೀವನೋಪಾಯ ಸಂವರ್ಧನಾ ಸಂಸ್ಥೆಗೆ 2012–13 ನೇ ಸಾಲಿಗೆ ರಾಜ್ಯದ ಪಾಲಿನ ಅನುದಾನವನ್ನು ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:**

1) ಕೇಂದ್ರ ಗ್ರಾಮೀಣಾಭಿವೃದ್ಧಿ ಮಂತ್ರಾಲಯ, (ಆಜೀವಿಕಾ) ನವದೆಹಲಿ ಇವರ ಅಧಿಕೃತ ಜ್ಞಾಪನಾ ಸಂಖ್ಯೆ ಎಫ್‌ಟಿಎಸ್ 25869 / ಎಲ್ – 13022 / 1 / 2012–ಆರ್.ಎಲ್ ದಿನಾಂಕ 11.02.2013.

2) ಕೇಂದ್ರ ಗ್ರಾಮೀಣಾಭಿವೃದ್ಧಿ ಮಂತ್ರಾಲಯ (ಎನ್‌ಆರ್‌ಎಲ್‌ಎಂ) ನವದೆಹಲಿ ಇವರ ಪತ್ರ ಸಂಖ್ಯೆ 13022 / 1 / 2012 (ಎಫ್‌ಟಿಎಸ್ – 25869) – ದಿನಾಂಕ 19.03.2013.

3) ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಆರ್ಥಿಕ ಇಲಾಖೆ ಬೆಂಗಳೂರು ಇವರ ಟಿಪ್ಪಣಿ ಸಂಖ್ಯೆ ದಿನಾಂಕ.27.03.2013 ರಂದು ನೀಡಿರುವ ಅನುಮೋದನೆ.

**ಪ್ರಸ್ತಾವನೆ:**

ಕೇಂದ್ರ ಗ್ರಾಮೀಣಾಭಿವೃದ್ಧಿ ಮಂತ್ರಾಲಯವು ಎಸ್‌ಜಿಎಸ್‌ವೈ ಯೋಜನೆಯನ್ನು ಪುನರ್‌ರಚಿಸಿ ಆಜೀವಿಕಾ (ನ್ಯಾಷನಲ್ ರೂರಲ್ ಲೈವ್ಲಿ ಹುಡ್ ಮಿಷನ್ (ಎನ್‌ಆರ್‌ಎಲ್‌ಎಂ)) ಜಾರಿಗೆ ತರಲಾಗಿದೆ. ಇದರಂತೆ, ರಾಜ್ಯ ಸರ್ಕಾರವು, ಎನ್‌ಆರ್‌ಎಲ್‌ಎಂ ಯೋಜನೆಯನ್ನು ರಾಜ್ಯಾದ್ಯಂತ ಹಂತ ಹಂತವಾಗಿ ಅನುಷ್ಠಾನಗೊಳಿಸಲು ತೀರ್ಮಾನಿಸಿದೆ. ಈ ಯೋಜನೆಯನ್ನು ರಾಜ್ಯದಲ್ಲಿ ಅನುಷ್ಠಾನಗೊಳಿಸುವ ನಿಟ್ಟಿನಲ್ಲಿ ಕರ್ನಾಟಕ ರಾಜ್ಯ ಗ್ರಾಮೀಣ ಜೀವನೋಪಾಯ ಸಂವರ್ಧನ ಸೊಸೈಟಿ (ಕರ್ನಾಟಕ ಸ್ಟೇಟ್ ರೂರಲ್ ಲೈವ್ಲಿಹುಡ್ ಪ್ರಮೋಷನ್ ಸೊಸೈಟಿ (ಕೆಎಸ್‌ಆರ್‌ಎಲ್‌ಪಿಎಸ್)) ಸ್ಥಾಪಿಸಲಾಗಿದೆ. "ಆಜೀವಿಕಾ" (ಎನ್‌ಆರ್‌ಎಲ್‌ಎಂ) ಯೋಜನೆಯನ್ನು ರಾಜ್ಯದಲ್ಲಿ "ಸಂಜೀವಿನಿ" ಹೆಸರಿನಲ್ಲಿ ಅನುಷ್ಠಾನಗೊಳಿಸಲಾಗುವುದು. ಪ್ರಥಮ ಹಂತದಲ್ಲಿ ರಾಜ್ಯದ 5 ಜಿಲ್ಲೆಗಳ (ಬೆಳಗಾಂ, ಧಾರವಾಡ, ಗುಲ್ಬರ್ಗಾ, ಮೈಸೂರು ಮತ್ತು ತುಮಕೂರು) 20 ತಾಲ್ಲೂಕು (ಬ್ಲಾಕ್) ಗಳನ್ನು ಆಯ್ಕೆ ಮಾಡಿಕೊಂಡು ಅನುಷ್ಠಾನಗೊಳಿಸಲಾಗುವುದು.

ಕರ್ನಾಟಕ ರಾಜ್ಯ ಗ್ರಾಮೀಣ ಜೀವನೋಪಾಯ ಸಂವರ್ಧನಾ ಸೊಸೈಟಿಯಿಂದ ಅನುಷ್ಠಾನಗೊಳಿಸುತ್ತಿರುವ "ಸಂಜೀವಿನಿ" (ಆಜೀವಿಕಾ (ನ್ಯಾಷನಲ್ ರೂರಲ್ ಲೈವ್ಲಿ ಹುಡ್ ಮಿಷನ್ (ಎನ್‌ಆರ್‌ಎಲ್‌ಎಂ)) ಕೇಂದ್ರ ಪುರಸ್ಕೃತ ಯೋಜನೆಯಾಗಿದ್ದು, ಯೋಜನೆಯ ಮಾರ್ಗಸೂಚಿಯಂತೆ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಅನುದಾನವನ್ನು 75 : 25 ರ ಅನುಪಾತದಲ್ಲಿ ಭರಿಸಬೇಕಾಗಿದೆ.

ಓದಲಾಗಿದೆ (1) ರ ಅಧಿಕೃತ ಜ್ಞಾಪನದಲ್ಲಿ ಕೇಂದ್ರ ಗ್ರಾಮೀಣಾಭಿವೃದ್ಧಿ ಮಂತ್ರಾಲಯದ ಅಧಿಕಾರಯುಕ್ತ ಸಮಿತಿಯು (Empowered Committee) ದಿನಾಂಕ : 23–01–2013 ರಂದು ನಡೆಸಿದ ಸಭೆಯಲ್ಲಿ 2012–13ನೇ ಸಾಲಿಗೆ ಸಂಬಂಧಿಸಿದಂತೆ ಕರ್ನಾಟಕ ರಾಜ್ಯ ಗ್ರಾಮೀಣ ಜೀವನೋಪಾಯ ಸಂವರ್ಧನಾ ಸೊಸೈಟಿಯು ಸಲ್ಲಿಸಿದ ವಾರ್ಷಿಕ ಕ್ರಿಯಾ ಯೋಜನೆ (ಎಎಪಿ) ಯಲ್ಲಿ ಪ್ರಸ್ತಾಪಿಸಿರುವ ವಿವಿಧ ಚಟುವಟಿಕೆಗಳ ಒಟ್ಟು

ರೂ.208.71 ಲಕ್ಷಗಳಿಗೆ ಅನುಮೋದನೆ ನೀಡಿದೆ. ಇದರಲ್ಲಿ ಕೇಂದ್ರ ಸರ್ಕಾರದ ಪಾಲು ರೂ.156.53 ಲಕ್ಷ ಮತ್ತು ರಾಜ್ಯ ಸರ್ಕಾರದ ಪಾಲು ರೂ.52.18 ಲಕ್ಷಗಳಾಗಿದೆ.

ಕೇಂದ್ರ ಗ್ರಾಮೀಣಾಭಿವೃದ್ಧಿ ಮಂತ್ರಾಲಯವು ಓದಲಾಗಿದೆ (2)ರ ಪತ್ರದಲ್ಲಿ ಕರ್ನಾಟಕ ರಾಜ್ಯ ಗ್ರಾಮೀಣ ಜೀವನೋಪಾಯ ಸಂವರ್ಧನಾ ಸೊಸೈಟಿಗೆ ತನ್ನ ಪಾಲಿನ ಪ್ರಥಮ ಕಂತಿನ ಅನುದಾನವಾಗಿ ರೂ.78.27 ಲಕ್ಷಗಳನ್ನು ಬಿಡುಗಡೆ ಮಾಡಿದೆ. ಈ ಅನುದಾನ ಬಿಡುಗಡೆಯಾದ ಒಂದು ತಿಂಗಳೊಳಗೆ ರಾಜ್ಯ ಸರ್ಕಾರವು ತನ್ನ ಪಾಲಿನ ಅನುದಾನವನ್ನು ಬಿಡುಗಡೆ ಮಾಡಬೇಕೆಂದು ಸೂಚಿಸಿದೆ. ಇದರಂತೆ, ರಾಜ್ಯ ಸರ್ಕಾರವು ಕೇಂದ್ರ ಬಿಡುಗಡೆ ಮಾಡಿದ ಅನುದಾನಕ್ಕನುಗುಣವಾಗಿ ತನ್ನ ಪಾಲಿನ ಅನುದಾನ (ಶೇ.25) ರೂ.26.09 ಲಕ್ಷಗಳನ್ನು ಕರ್ನಾಟಕ ರಾಜ್ಯ ಗ್ರಾಮೀಣ ಜೀವನೋಪಾಯ ಸಂವರ್ಧನಾ ಸೊಸೈಟಿಗೆ ಬಿಡುಗಡೆ ಮಾಡಬೇಕಾಗಿದೆ. ಆದುದರಿಂದ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಗ್ರಾಅಪ 23 ಎಸ್‌ಜಿವೈ 2013, ಬೆಂಗಳೂರು, ದಿನಾಂಕ 28–03–2013**

ರಾಜ್ಯ ಸರ್ಕಾರವು, ಕರ್ನಾಟಕ ರಾಜ್ಯ ಗ್ರಾಮೀಣ ಜೀವನೋಪಾಯ ಸಂವರ್ಧನಾ ಸೊಸೈಟಿ (ಕೆಎಸ್‌ಆರ್‌ಎಲ್‌ಪಿಎಸ್) ವತಿಯಿಂದ " ಸಂಜೀವಿನಿ " ಯೋಜನೆಯನ್ನು ಅನುಷ್ಠಾನಗೊಳಿಸಲು 2012–13ನೇ ಸಾಲಿಗೆ ರಾಜ್ಯದ ಪಾಲಿನ ಅನುದಾನ ರೂ.26.09 ಲಕ್ಷಗಳನ್ನು (ಇಪ್ಪತ್ತಾರು ಲಕ್ಷದ ಒಂಬತ್ತು ಸಾವಿರ ರೂ. ಮಾತ್ರ) ಕೆಎಸ್‌ಆರ್‌ಎಲ್‌ಪಿಎಸ್ ಗೆ ಕೆಳಕಂಡ ಷರತ್ತಿಗೊಳಪಟ್ಟು ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

**ಷರತ್ತುಗಳು :**

1. ಯೋಜನೆಯ ವೆಚ್ಚವನ್ನು ಪ್ರಧಾನ ಲೆಕ್ಕಶೀರ್ಷಿಕೆ 2501 ಗ್ರಾಮೀಣಾಭಿವೃದ್ಧಿಗಾಗಿ ವಿಶೇಷ ಕಾರ್ಯಕ್ರಮಗಳು 01 ಸಮಗ್ರ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳು–198 ಗ್ರಾಮ ಪಂಚಾಯತ್‌ಗಳಿಗೆ ಸಹಾಯ–6 ಗ್ರಾಮ ಪಂಚಾಯತ್‌ಗಳು–01–ಬ್ಲಾಕ್ ಅನುದಾನ ಕೇಂದ್ರ ಪುರಸ್ಕೃತ ಯೋಜನೆ [ನ್ಯಾಷನಲ್ ರೂರಲ್ ಲೈವ್ಲಿ ಹುಡ್ ಪ್ರಾಜೆಕ್ಟ್ (ಎನ್‌ಆರ್‌ಎಲ್‌ಎಂ)] 2012–2013 ಲಿಂಕ್ ಕೋಡ್ 2501–01–198–6–01 "(ಹೊಸ ಕೋಡ್ 2501–00–101–0–05) ರಡಿ ಸಂಜೀವಿನಿ (ಎನ್‌ಆರ್‌ಎಲ್‌ಎಂ) ಅನುಷ್ಠಾನಕ್ಕಾಗಿ ಭರಿಸುವುದು.
2. ಮಿಷನ್ ಡೈರೆಕ್ಟರ್, ಕೆಆರ್‌ಎಲ್‌ಪಿಎಸ್, ಬೆಂಗಳೂರು ಇವರು ರುಜು ಮಾಡಿದ ಸ್ವೀಕೃತ ರಸೀದಿ (payees receipt) ಯನ್ನು ಸರ್ಕಾರಕ್ಕೆ ಸಲ್ಲಿಸುವುದು. ನಂತರ ಸ್ವೀಕೃತ ರಸೀದಿ (payees receipt) ಗೆ ನಿರ್ದೇಶಕರು (ಸ್ವಉಕಾ) ಹಾಗೂ ಪ.ನಿ. ಸರ್ಕಾರದ ಉಪ ಕಾರ್ಯದರ್ಶಿಗಳು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರ ಮೇಲುರುಜು ಮಾಡುವುದು. ಉಪ ನಿರ್ದೇಶಕರು (ಸ್ವಉಕಾ), ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರು ಅನುದಾನವನ್ನು ಸೆಳೆಯಲು ರಾಜ್ಯ ಹುಜೂರ್ ಖಜಾನೆ, ಬೆಂಗಳೂರು ಇಲ್ಲಿಗೆ ಸಲ್ಲಿಸುವುದು. ಅನುದಾನದ ಚೆಕ್ ಬಂದ ನಂತರ ಮಿಷನ್ ಡೈರೆಕ್ಟರ್, ಕೆಎಸ್‌ಆರ್‌ಎಲ್‌ಪಿಎಸ್, ಬೆಂಗಳೂರು ಇವರಿಗೆ ನೀಡಿ ಸ್ವೀಕೃತಿ ಪಡೆಯುವುದು.
3. ಗ್ರಾಮೀಣಾಭಿವೃದ್ಧಿ ಮಂತ್ರಾಲಯ, ನವದೆಹಲಿಯಿಂದ ಅನುಮೋದಿತವಾಗಿರುವ ಕೆ.ಎಸ್.ಆರ್.ಎಲ್.ಪಿ.ಎಸ್. ಸಂಸ್ಥೆಯ ವಾರ್ಷಿಕ ಕ್ರಿಯಾ ಯೋಜನೆಯಲ್ಲಿನ ಚಟುವಟಿಕೆಗಳಿಗೆ ಮಾತ್ರ ಅನುದಾನವನ್ನು ಉಪಯೋಗಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆ, ವೆಚ್ಚ–6 ಟಿಪ್ಪಣಿ ಸಂಖ್ಯೆ : ಆಇ 213 ವೆಚ್ಚ 6/2013 ದಿನಾಂಕ 27–03–2013 ರ ಸಹಮತಿಯೊಂದಿಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ. ದೀಪ**
ನಿರ್ದೇಶಕರು (ಸ್ವಉಕಾ)
ಹಾಗೂ ಪ.ನಿ. ಸರ್ಕಾರದ ಉಪ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

**PR.485**
**S/C.10**

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ:** ಎಸ್‌ಜಿಎಸ್‌ವೈಯಡಿ 2012–13ನೇ ಸಾಲಿಗೆ ಗುಲ್ಬರ್ಗಾ ಮತ್ತು ಕೊಡಗು ಜಿಲ್ಲಾ ಪಂಚಾಯತಿಗಳಿಗೆ ಒಂದನೇ ಕಂತಿನ ಅನುದಾನ ಹಾಗೂ ಬಾಗಲಕೋಟೆ, ಧಾರವಾಡ, ದಕ್ಷಿಣ ಕನ್ನಡ, ದಾವಣಗೆರೆ, ತುಮಕೂರು, 2ನೇ ಕಂತಿನ ರಾಜ್ಯದ ಪಾಲಿನ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:**
1. ಕೇಂದ್ರ ಗ್ರಾಮೀಣಾಭಿವೃದ್ಧಿ ಮಂತ್ರಾಲಯ ನವದೆಹಲಿ ಎಫ್‌ಟಿಎಸ್ ಫೈಲ್ಸ್ ನಂ. 18080/2012 ಸಂಖ್ಯೆ: ಜಿ–20011/2/2012 ಎಸ್‌ಜಿಎಸ್‌ವೈ (1) ದಿನಾಂಕ 11.04.2012.
2. ಕೇಂದ್ರ ಗ್ರಾಮೀಣಾಭಿವೃದ್ಧಿ ಮಂತ್ರಾಲಯ ನವದೆಹಲಿ ಪತ್ರ ಸಂಖ್ಯೆ :ಜೆ–11060/7/2012 ಎಸ್‌ಜಿಎಸ್‌ವೈ (I) (12) ದಿನಾಂಕ 01.06.2012.
3. ಕೇಂದ್ರ ಸರ್ಕಾರದ ಅನುದಾನ ಜಮೆ ದಿನಾಂಕ 18.06.2012.
4. ಕೇಂದ್ರ ಗ್ರಾಮೀಣಾಭಿವೃದ್ಧಿ ಮಂತ್ರಾಲಯ ನವದೆಹಲಿಯ ಆರ್‌ಎಲ್ –ಎಫ್‌ಟಿಎಸ್ 19407 ದಿನಾಂಕ 05.07.2012.
5. ಆರ್ಥಿಕ ಇಲಾಖೆ [ವೆಚ್ಚ–6], ಬೆಂಗಳೂರು, ಇವರ ಸಂಖ್ಯೆ:ಆಇ 366 ವೆಚ್ಚ–06/2012 ದಿನಾಂಕ 26–09–2012, 26–11–2012 ಮತ್ತು 15.02.2013 ಮತ್ತು 12.03.2013.
6. ಸರ್ಕಾರದ ಆದೇಶ ಸಂಖ್ಯೆ:ಗ್ರಾಅಪ 24 ಎಸ್‌ಜಿವೈ 2012 ಬೆಂಗಳೂರು, ದಿನಾಂಕ 10.08.2012.
7. ಸರ್ಕಾರದ ಆದೇಶ ಸಂಖ್ಯೆ:ಗ್ರಾಅಪ 43 ಎಸ್‌ಜಿವೈ 2012 ಬೆಂಗಳೂರು, ದಿನಾಂಕ 15.11.2012, ತಿದ್ದುಪಡಿ ಸಮ ಸಂಖ್ಯೆ ದಿನಾಂಕ 17.11.2012, ಸರ್ಕಾರದ ಆದೇಶದ ಸಮ ಸಂಖ್ಯೆ ದಿನಾಂಕ 12.12.2012, 04.03.2013 ಮತ್ತು 19.03.2013.

8. ಕೇಂದ್ರ ಗ್ರಾಮೀಣಾಭಿವೃದ್ಧಿ ಮಂತ್ರಾಲಯ ನವದೆಹಲಿ ಪತ್ರ ಸಂಖ್ಯೆ: ಜೆ–11022/2/2011 ಎಸ್‌ಜಿಎಸ್‌ವೈ–I 321) ದಿನಾಂಕ 31.12.2012.
9. ಕೇಂದ್ರ ಗ್ರಾಮೀಣಾಭಿವೃದ್ಧಿ ಮಂತ್ರಾಲಯ ನವದೆಹಲಿ ಪತ್ರ ಸಂಖ್ಯೆ: ಜೆ–12022/4/2011 ಎಸ್‌ಜಿಎಸ್‌ವೈ (I)(11) ದಿನಾಂಕ 03.01.2013.
10. ಕೇಂದ್ರ ಗ್ರಾಮೀಣಾಭಿವೃದ್ಧಿ ಮಂತ್ರಾಲಯ ನವದೆಹಲಿ ಪತ್ರ ಸಂಖ್ಯೆ: ಜೆ–12022/2/2012–ಆರ್‌ಎಲ್(39)ಎ,ಬಿ,ಸಿ ದಿನಾಂಕ 21.02.2013.
11. ಕೇಂದ್ರ ಗ್ರಾಮೀಣಾಭಿವೃದ್ಧಿ ಮಂತ್ರಾಲಯ ನವದೆಹಲಿ ಪತ್ರ ಸಂಖ್ಯೆ: ಜೆ–12022/4/2012–ಆರ್‌ಎಲ್(40)ಎ,ಬಿ,ಸಿ ದಿನಾಂಕ 27.02.2013.
12. ಕೇಂದ್ರ ಗ್ರಾಮೀಣಾಭಿವೃದ್ಧಿ ಮಂತ್ರಾಲಯ ನವದೆಹಲಿ ಪತ್ರ ಸಂಖ್ಯೆ: ಜೆ–11022/6/2011–ಎಸ್‌ಜಿಎಸ್‌ವೈ–I (36) ದಿನಾಂಕ 27.02.2013.
13. ಕೇಂದ್ರ ಗ್ರಾಮೀಣಾಭಿವೃದ್ಧಿ ಮಂತ್ರಾಲಯ ನವದೆಹಲಿ ಪತ್ರ ಜೆ–12022/7/2011–ಎಸ್‌ಜಿಎಸ್‌ವೈ–I(50ಎ)(50ಬಿ)(50ಸಿ) ದಿನಾಂಕ 28.02.2013.
14. ಆರ್ಥಿಕ ಇಲಾಖೆ [ವೆಚ್ಚ–6], ಬೆಂಗಳೂರು, ಇವರ ಸಂಖ್ಯೆ: ಆಇ 366 ವೆಚ್ಚ 6/2012 ದಿನಾಂಕ 27.03.2013.

**ಪ್ರಸ್ತಾವನೆ:**

ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆಯು (ಎಸ್‌ಜಿಎಸ್‌ವೈ) ಕೇಂದ್ರ ಪುರಸ್ಕೃತ ಯೋಜನೆಯಾಗಿದ್ದು, ಯೋಜನೆಯ ಮಾರ್ಗಸೂಚಿಯಂತೆ ಕೇಂದ್ರ ಮತ್ತು ರಾಜ್ಯ ಸರ್ಕಾರ ಅನುದಾನವನ್ನು 75 : 25 ರ ಅನುಪಾತದಲ್ಲಿ ಭರಿಸಬೇಕಾಗಿದೆ. ಕೇಂದ್ರ ಗ್ರಾಮೀಣಾಭಿವೃದ್ಧಿ ಮಂತ್ರಾಲಯ ಓದಲಾಗಿದೆ (1)ರಲ್ಲಿ ಎಸ್‌ಜಿಎಸ್‌ವೈ/ ಎನ್‌ಆರ್‌ಎಲ್‌ಎಂ ಯೋಜನೆ ಅನುಷ್ಠಾನಕ್ಕಾಗಿ ₹1,17,02,67,000/– ಹಂಚಿಕೆ ಮಾಡಿದೆ. ಈ ಪೈಕಿ ಕೇಂದ್ರದ ಪಾಲು ₹87,77,00,000/– ಹಾಗೂ ರಾಜ್ಯದ ಪಾಲು ₹29,25,67,000/–ಆಗಿರುತ್ತದೆ. ಆದರೆ, 2012–13ನೇ ಸಾಲಿಗೆ ರಾಜ್ಯದ ಆಯವ್ಯಯದಲ್ಲಿ ಎಸ್‌ಜಿಎಸ್‌ವೈ ಯೋಜನೆಯ ಅನುಷ್ಠಾನಕ್ಕಾಗಿ ರಾಜ್ಯದ ಪಾಲಿನ ಅನುದಾನ ಬಿಡುಗಡೆ ಮಾಡಲು ಯಾವುದೇ ಅನುದಾನವನ್ನು ಕಾಯ್ದಿರಿಸಿರುವುದಿಲ್ಲ. ಏಕೆಂದರೆ, ಕೇಂದ್ರ ಸರ್ಕಾರ 2012–13ನೇ ಸಾಲಿಗೆ ಎಸ್‌ಜಿಎಸ್‌ವೈ ಯೋಜನೆಯ ಬದಲಿಗೆ ಆಜೀವಿಕ (ಎನ್‌ಆರ್‌ಎಲ್‌ಎಂ) ಜಾರಿಗೆ ಬರುವುದಾಗಿ ತಿಳಿಸಿದ್ದರಿಂದ ಪ್ರಧಾನ ಲೆಕ್ಕ ಶೀರ್ಷಿಕೆ "2501 ಗ್ರಾಮೀಣಾಭಿವೃದ್ಧಿಗಾಗಿ ವಿಶೇಷ ಕಾರ್ಯಕ್ರಮಗಳು 01 ಸಮಗ್ರ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳು–198 ಗ್ರಾಮ ಪಂಚಾಯತ್‌ಗಳಿಗೆ ಸಹಾಯ–6 ಗ್ರಾಮ ಪಂಚಾಯತ್‌ಗಳು–01–ಬ್ಲಾಕ್ ಅನುದಾನ ಕೇಂದ್ರ ಪುರಸ್ಕೃತ ಯೋಜನೆ (ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆ) 2012–2013ನೇ ಲಿಂಕ್ ಕೋಡ್ 2501–01–198–6–01" (ಹೊಸ ಜಿಲ್ಲಾ ಪಂಚಾಯತಿ ಕೋಡ್ 2501–01–101–0–13)ನಲ್ಲಿ 2012–13ನೇ ಸಾಲಿನ ರಾಜ್ಯದ ಆಯವ್ಯಯದಲ್ಲಿ ಯಾವುದೇ ಅನುದಾನ ಕಾಯ್ದಿರಿಸಿಕೊಂಡಿರುವುದಿಲ್ಲ. ಎಸ್‌ಜಿಎಸ್‌ವೈ ಯೋಜನೆ ಬದಲಿಗೆ ಜಾರಿಗೆ ಬಂದಿರುವ ಆಜೀವಿಕ (ಎನ್‌ಆರ್‌ಎಲ್‌ಎಂ) ಯೋಜನೆಗಾಗಿ ಪ್ರಧಾನ ಲೆಕ್ಕ ಶೀರ್ಷಿಕೆ "2501 ಗ್ರಾಮೀಣಾಭಿವೃದ್ಧಿಗಾಗಿ ವಿಶೇಷ ಕಾರ್ಯಕ್ರಮಗಳು 01 ಸಮಗ್ರ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳು–198 ಗ್ರಾಮ ಪಂಚಾಯತ್‌ಗಳಿಗೆ ಸಹಾಯ–6 ಗ್ರಾಮ ಪಂಚಾಯತ್‌ಗಳು–01–ಬ್ಲಾಕ್ ಅನುದಾನ ಕೇಂದ್ರ ಪುರಸ್ಕೃತ ಯೋಜನೆ (ನ್ಯಾಷನಲ್ ರೂರಲ್ ಲೈವ್ಲಿ ಹುಡ್ ಪ್ರಾಜೆಕ್ಟ್ (ಎನ್‌ಆರ್‌ಎಲ್‌ಎಂ)) 2012–2013 ನೇ ಲಿಂಕ್ ಕೋಡ್ 2501–01–198–6–01 "(ಹೊಸ ಕೋಡ್ 2501–00–101–0–05)ನಲ್ಲಿ 2012–13ನೇ ಸಾಲಿನ ರಾಜ್ಯದ ಆಯವ್ಯಯದಲ್ಲಿ ಒಟ್ಟಾರೆ ಅನುದಾನ ಬಿಡುಗಡೆಗಾಗಿ ₹1,20,00,00,000/– ಕಾಯ್ದಿರಿಸಲಾಗಿದ್ದು, ಈ ಪೈಕಿ ರಾಜ್ಯದ ಪಾಲಿನ ಅನುದಾನ ಬಿಡುಗಡೆಗಾಗಿ ₹30,00,00,000/– ಆಗಿರುತ್ತದೆ. ಕೇಂದ್ರ ಸರ್ಕಾರವು ಬಿಡುಗಡೆ ಮಾಡುವ ಅನುದಾನಕ್ಕನುಗುಣವಾಗಿ ರಾಜ್ಯದ ಪಾಲಿನ ಅನುದಾನವನ್ನು ಬಿಡುಗಡೆ ಮಾಡಲೇಬೇಕಾಗಿರುತ್ತದೆ. ಆದ್ದರಿಂದ ಎಸ್‌ಜಿಎಸ್‌ವೈ ಯೋಜನೆ ಬದಲಿಗೆ ಜಾರಿಗೆ ಬಂದಿರುವ ಆಜೀವಿಕ (ಎನ್‌ಆರ್‌ಎಲ್‌ಎಂ) ಯೋಜನೆಗಾಗಿ ಕಾಯ್ದಿರಿಸಲಾಗಿರುವ ಅನುದಾನದಿಂದ ಬಿಡುಗಡೆ ಮಾಡಬೇಕಾಗಿದೆ.

ಕೇಂದ್ರ ಗ್ರಾಮೀಣಾಭಿವೃದ್ದಿ ಮಂತ್ರಾಲಯ ಓದಲಾಗಿದೆ (2), (4) ಮತ್ತು (7) ರನ್ವಯ ರಾಜ್ಯದ 27 ಜಿಲ್ಲಾ ಪಂಚಾಯತ್‌ಗಳಿಗೆ 1ನೆ ಕಂತಿನ ಅನುದಾನ ₹.40,50,53,000/– ಬಿಡುಗಡೆ ಮಾಡಿದೆ. ಆರ್ಥಿಕ ಇಲಾಖೆ ಓದಲಾಗಿದೆ (5) ರಲ್ಲಿ ರಾಜ್ಯ ಜಿಲ್ಲಾ ಪಂಚಾಯತ್‌ಗಳಿಗೆ ರಾಜ್ಯದ ಪಾಲಿನ ಅನುದಾನ ಬಿಡುಗಡೆ ಮಾಡಲು ₹13,50,17,000/– ಒದಗಿಸಿದ್ದು ಈ ಅನುದಾನವನ್ನು 27 ಜಿಲ್ಲಾ ಪಂಚಾಯತ್‌ಗಳಿಗೆ ಈಗಾಗಲೇ ಬಿಡುಗಡೆ ಮಾಡಲಾಗಿದೆ.

ಕೇಂದ್ರ ಸರ್ಕಾರ ಓದಲಾಗಿದೆ (10) ರಿಂದ (13) ರಲ್ಲಿ 7 ಜಿಲ್ಲಾ ಪಂಚಾಯತಿಗಳಿಗೆ 2012–13ನೇ ಒಂದನೇ/ಎರಡನೇ ಕಂತಿನ ಒಟ್ಟಾರೆ ಅನುದಾನ ₹5,45,14,000/– ಬಿಡುಗಡೆ ಮಾಡಿದೆ. ಆರ್ಥಿಕ ಇಲಾಖೆ ಓದಲಾಗಿದೆ (14)ರಲ್ಲಿ 7 ಜಿಲ್ಲಾ ಪಂಚಾಯತಿಗಳ ರಾಜ್ಯದ ಪಾಲಿನ ಒಂದನೇ/ಎರಡನೇ ಕಂತಿನ ಅನುದಾನ ₹.1,81,70,000/– ಬಿಡುಗಡೆ ಮಾಡಲು ಸಹಮತಿ ನೀಡಿದೆ. ಇದರಂತೆ ಗುಲ್ಬರ್ಗಾ, ಕೊಡಗು, ಬಾಗಲಕೋಟೆ, ಧಾರವಾಡ. ದಕ್ಷಿಣ ಕನ್ನಡ, ದಾವಣಗೆರೆ ಮತ್ತು ತುಮಕೂರು, ಜಿಲ್ಲಾ ಪಂಚಾಯತಿಗಳಿಗೆ ಒಂದನೇ/ಎರಡನೇ ಕಂತಿನ ಅನುದಾನ ₹.1,81,70,000/– ಬಿಡುಗಡೆ ಮಾಡಬೇಕಾಗಿದೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಗ್ರಾಅಪ 43 ಎಸ್‌ಜೆವೈ 2012, ಬೆಂಗಳೂರು, ದಿನಾಂಕ 28.03.2013**

ರಾಜ್ಯ ಸರ್ಕಾರವು, ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆಯಡಿ (ಎಸ್‌ಜಿಎಸ್‌ವೈ) 2012–13ನೇ ಸಾಲಿಗೆ ರಾಜ್ಯದ ಕೆಳಗೆ ತೋರಿಸಿರುವಂತೆ ಜಿಲ್ಲಾ ಪಂಚಾಯತಿಗಳಿಗೆ ರಾಜ್ಯದ ಪಾಲಿನ ಒಂದನೇ/ಎರಡನೇ ಕಂತಿನ ಅನುದಾನ ₹.1,81,70,000/– (ಒಂದು ಕೋಟಿ ಎಂಭತ್ತೊಂದು ಲಕ್ಷದ ಎಪ್ಪತ್ತು ಸಾವಿರ ರೂಪಾಯಿಗಳು ಮಾತ್ರ) ಎನ್‌ಆರ್‌ಎಲ್‌ಎಂ ಅನುಷ್ಠಾನಕ್ಕಾಗಿ ನಿಗಧಿಪಡಿಸಿರುವ 300 lump sum ಅನುದಾನದಿಂದ ಭರಿಸಿ ಕೆಳಕಂಡ ಷರತ್ತಿಗೊಳಪಟ್ಟು ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

(ರೂ.ಗಳಲ್ಲಿ)

| ಕ್ರ ಸ.ಂ | ಜಿಲ್ಲಾ ಪಂಚಾಯತಿಯ ಹೆಸರು | ಡಿ.ಡಿ.ಓ ಕೋಡ್ | ಕೇದ್ರ ಸರ್ಕಾರ ಬಿಡುಗಡೆ ಮಾಡಿದ ಒಂದನೇ/ಎರಡನೇ ಕಂತಿನ ಅನುದಾನ | ರಾಜ್ಯ ಸರ್ಕಾರವು ಬಿಡುಗಡೆ ಮಾಡುತ್ತಿರುವ ಒಂದನೇ/ಎರಡನೇ ಕಂತಿನ ಅನುದಾನ |
|---|---|---|---|---|
| 1 | 2 | 3 | 4 | 5 |
| 1 | ಗುಲ್ಬರ್ಗಾ [1ನೇ ಕಂತು] | 3200ZZ0003 | 1,74,02,000 | 58,00,000 |
| 2 | ಕೊಡಗು [1ನೇ ಕಂತು] | 1200ZZ0001 | 35,53,000 | 11,84,000 |
| 3 | ಬಾಗಲಕೋಟೆ [2ನೇ ಕಂತು] | 2900ZZ0001 | 1,03,57,000 | 34,52,000 |
| 4 | ಧಾರವಾಡ [2ನೇ ಕಂತು] | 2500ZZ8798 | 87,25,000 | 29,08,000 |
| 5 | ದಕ್ಷಿಣ ಕನ್ನಡ [2ನೇ ಕಂತು] | 1900ZZ0047 | 35,48,000 | 11,83,000 |
| 6 | ದಾವಣಗೆರೆ [2ನೇ ಕಂತು] | 1700ZZ0002 | 1,09,29,000 | 36,43,000 |
| 7 | ತುಮಕೂರು [2ನೇ ಕಂತು] | 0800ZZ0001 | 0 | 0 |
| | | ಒಟ್ಟು | **5,45,14,000** | **1,81,70,000** |

**ಷರತ್ತುಗಳು:**

1999 ಮೇ ತಿಂಗಳ ಎಸ್‌ಜಿಎಸ್‌ವೈ ಕೈಪಿಡಿಯ ಮಾರ್ಗಸೂಚಿಯಂತೆ ಹಣವನ್ನು ಉಪಯೋಗಿಸುವುದು. ಅನುಷ್ಠಾನ ಏಜೆನ್ಸಿಗಳಿಗೆ ಸರ್ಕಾರಿ ಆದೇಶ ತಲುಪಿದ 15 ದಿವಸದೊಳಗೆ ಬಿಡುಗಡೆ ಮಾಡತಕ್ಕದ್ದು.

ಯೋಜನೆಯ ವೆಚ್ಚವನ್ನು ಪ್ರಧಾನ ಲೆಕ್ಕ ಶೀರ್ಷಿಕೆ "2501 ಗ್ರಾಮೀಣಾಭಿವೃದ್ಧಿಗಾಗಿ ವಿಶೇಷ ಕಾರ್ಯಕ್ರಮಗಳು 01 ಸಮಗ್ರ ಗ್ರಾಮೀಣಾಭಿವೃದ್ಧಿ ಕಾರ್ಯಕಮಗಳು–198 ಗ್ರಾಮ ಪಂಚಾಯತ್‌ಗಳಿಗೆ ಸಹಾಯ–6 ಗ್ರಾಮ ಪಂಚಾಯತ್‌ಗಳು–01–ಬ್ಲಾಕ್ ಅನುದಾನ ಕೇಂದ್ರ ಪುರಸ್ಕೃತ ಯೋಜನೆ [ನ್ಯಾಷನಲ್ ರೂರಲ್ ಲೈವ್ಲಿ ಹುಡ್ ಪ್ರಾಜೆಕ್ಟ್ (ಎನ್‌ಆರ್‌ಎಲ್‌ಎಂ)] 2012–2013 ಲಿಂಕ್ ಕೋಡ್ 2501–01–198–6–01 "(ಹೊಸ ಕೋಡ್ 2501–00–101–0–05) ರಡಿ ಎನ್‌ಆರ್‌ಎಲ್‌ಎಂ ಅನುಷ್ಠಾನಕ್ಕಾಗಿ ರಾಜ್ಯದ ಆಯವ್ಯಯದಲ್ಲಿ 300 lump sum ನಲ್ಲಿ ಒದಗಿಸಿರುವ ಅನುದಾನದಿಂದ ಸರ್ಕಾರಿ ಆದೇಶ ಸಂಖ್ಯೆ : ಎಫ್‌ಡಿ 7 ಜೆಡ್‌ಪಿಎ 2003 ದಿನಾಂಕ 14–07–2005 ರನ್ವಯ ಖಜಾನೆಯಿಂದ ಪಡೆಯುವುದು.

ರಾಜ್ಯದ ಗುಲ್ಬರ್ಗಾ, ಕೊಡಗು, ಬಾಗಲಕೋಟೆ, ಧಾರವಾಡ. ದಕ್ಷಿಣ ಕನ್ನಡ, ದಾವಣಗೆರೆ ಮತ್ತು ತುಮಕೂರು, ಜಿಲ್ಲಾ ಪಂಚಾಯತಿಗಳ ಮುಖ್ಯ ಲೆಕ್ಕಾಧಿಕಾರಿಗಳಿಗೆ ಖಜಾನೆಯಿಂದ ಅನುದಾನವನ್ನು ಸೆಳೆಯಲು ಕಾನೂನು ರೀತ್ಯ ಅಧಿಕಾರ ನೀಡಲಾಗಿದೆ. ಖಜಾನೆಯಿಂದ ಅನುದಾನವನ್ನು ಪೇಯೀಸ್ ರಸೀದಿ ಮೇಲೆ ಸೆಳೆಯಲು ಆರ್ಥಿಕ ಇಲಾಖೆ (ವೆಚ್ಚ–6)ಯ ಸಂಖ್ಯೆ ಆಇ 172 ವೆಚ್ಚ–6/2011 ದಿನಾಂಕ 30–03–2011 ರಂತೆ ಸಹಮತಿಸಿದೆ. ಈ ಯೋಜನೆಯಡಿ ಕೇಂದ್ರ ಸರ್ಕಾರವು ನೇರವಾಗಿ ಜಿಲ್ಲಾ ಪಂಚಾಯತಿಗೆ ಬಿಡುಗಡೆ ಮಾಡಿರುವ ಅನುದಾನ ಮತ್ತು ರಾಜ್ಯದ ಪಾಲಿನ ಅನುದಾನವೂ ಸೇರಿದಂತೆ ಒಟ್ಟು ಅನುದಾನವನ್ನು ಸರ್ಕಾರದ ಸುತ್ತೋಲೆ ಸಂಖ್ಯೆ : ಗ್ರಾಅಪ 14 ಎಸ್‌ಜಿವೈ 2007 ದಿನಾಂಕ 18–04–2007ರ ಸೂಚನೆಯಂತೆ ಕ್ರಮ ಕೈಗೊಳ್ಳುವುದು. ಇದಲ್ಲದೆ ಓದಲಾಗಿದೆ 6ರ ಆದೇಶದಲ್ಲಿ ವಿಧಿಸಿರುವ ಎಲ್ಲಾ ಷರತ್ತುಗಳನ್ನು ಸಹ ತಪ್ಪದೆ ಪಾಲಿಸುವುದು.

ಬಿಡುಗಡೆ ಮಾಡುವ ಅನುದಾನದ ಆಂತರಿಕ ಲೆಕ್ಕ ಪರಿಶೋಧನೆಯನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಮಾಡುವುದು.

2012–13ನೇ ಸಾಲಿನ ಅನುಮೋದಿತ ವಾರ್ಷಿಕ ಯೋಜನೆಯನ್ನು ಗುಲ್ಬರ್ಗಾ, ಕೊಡಗು, ಬಾಗಲಕೋಟೆ, ಧಾರವಾಡ. ದಕ್ಷಿಣ ಕನ್ನಡ, ದಾವಣಗೆರೆ ಮತ್ತು ತುಮಕೂರು, ಜಿಲ್ಲಾ ಪಂಚಾಯತಿಗಳ ಯೋಜನಾ ನಿರ್ದೇಶಕರು (ಡಿಆರ್‌ಡಿಎ) ಇವರು ಸರ್ಕಾರಕ್ಕೆ ಸಲ್ಲಿಸುವುದು.

ಆರ್ಥಿಕ ಮತ್ತು ಭೌತಿಕ ಸಾಧನೆಯ ಮಾಸಿಕ ಪಗತಿ ವರದಿಯನ್ನು ಪ್ರತಿ ಮಾಹೆಯ 5ನೇ ತಾರೀಖಿನೊಳಗೆ ಕೇಂದ್ರ ಸರ್ಕಾರದ online upload ಮಾಡಿ ಪ್ರತಿಯನ್ನು ಸ್ವ ಉದ್ಯೋಗ ಕಾರ್ಯಕ್ರಮಗಳ ಶಾಖೆಗೆ ತಪ್ಪದೇ ಕಳುಹಿಸುವುದು.

ಗುಲ್ಬರ್ಗಾ, ಕೊಡಗು, ಬಾಗಲಕೋಟೆ, ಧಾರವಾಡ. ದಕ್ಷಿಣ ಕನ್ನಡ, ದಾವಣಗೆರೆ ಮತ್ತು ತುಮಕೂರು, ಜಿಲ್ಲಾ ಪಂಚಾಯತಿಗಳ ಮುಖ್ಯ ಲೆಕ್ಕಾಧಿಕಾರಿಗಳು ಹಣ ಉಪಯೋಗ ಪ್ರಮಾಣ ಪತ್ರ ಹಾಗೂ ಆಡಿಟ್ ಮಾಡಿದ ಲೆಕ್ಕಗಳನ್ನು ನಿರ್ದೇಶಕರು (ಸ್ವಉಕಾ) ಹಾಗೂ ಪ.ನಿ. ಸರ್ಕಾರದ ಉಪ ಕಾರ್ಯದರ್ಶಿಗಳು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರಿಗೆ ತಪ್ಪದೇ ಕಳುಹಿಸುವುದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಇವರ ಸಹಮತಿ ಸಂಖ್ಯೆ: ಗ್ರಾಅಪ:162:ಪಿ.ಬಿ.ಎಸ್ 2013 ದಿನಾಂಕ 28–03–2013 ರಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ದೀಪ**

ನಿರ್ದೇಶಕರು (ಸ್ವಉಕಾ)

ಹಾಗೂ ಪ.ನಿ. ಸರ್ಕಾರದ ಉಪ ಕಾರ್ಯದರ್ಶಿ,

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

**PR.471**

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ:–** 4 ಸಹಕಾರಿ ಸಕ್ಕರೆ ಕಾರ್ಖಾನೆಗಳಿಗೆ ಬಿಡುಗಡೆ ಮಾಡಲಾದ ಬಡ್ಡಿರಹಿತ ಸಾಲಗಳ ಮರುಪಾವತಿಗೆ ಷರತ್ತು ಮತ್ತು ನಿಬಂಧನೆಗಳನ್ನು ನಿಗದಿಪಡಿಸುವ ಬಗ್ಗೆ.

**ಓದಲಾಗಿದೆ:–** ಸರ್ಕಾರದ ಆದೇಶ ಸಂಖ್ಯೆ ಸಿಐಡಬ್ಲ್ಯೂ 72 ಸಿಓಎಫ್ 1986 ದಿನಾಂಕ 24–3–1988.

**ಪ್ರಸ್ತಾವನೆ:–**

ಮೇಲೆ ಓದಲಾದ ಸರ್ಕಾರಿ ಆದೇಶದಲ್ಲಿ (1) ಶ್ರೀರಾಮ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತ (2) ಭದ್ರಾ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತ (3) ಕರ್ನಾಟಕ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತ (4) ಶ್ರೀ ಹಾಲಸಿದ್ಧನಾಥ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತ – ಈ ಕಾರ್ಖಾನೆಗಳು ಸರ್ಕಾರಿ ಖಾತರಿ ಮೇರೆಗೆ ಪಡೆದ ಸಾಲಗಳ ಮೇಲಿನ ಬಡ್ಡಿ ತೀರುವಳಿಗೆ ₹100.00 ಲಕ್ಷ ಬಡ್ಡಿರಹಿತ ಸಾಲವನ್ನು ಲೆಕ್ಕಶೀರ್ಷಿಕೆ 4860 Capital outlay on consumer Industries - 04 – Sugar – 190 investment in Public Sector and other under takings – 3- Co-operative Sugar Mills (plan). ರಡಿ ಮಂಜೂರು ಮಾಡಲಾಗಿತ್ತು. ಈ ಆದೇಶದಲ್ಲಿ ಸದರಿ 4 ಸಹಕಾರಿ ಸಕ್ಕರೆ ಕಾರ್ಖಾನೆಗಳಿಗೆ ಬಿಡುಗಡೆ ಮಾಡಿರುವ ಸಾಲಗಳ ಮರುಪಾವತಿಗೆ ಷರತ್ತು ಮತ್ತು ನಿಬಂಧನೆಗಳನ್ನು ನಿಗದಿಪಡಿಸಲು ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ವಾಕೈ 92 ಸಸಕಾ 2011, ಬೆಂಗಳೂರು, ದಿನಾಂಕ: 03.01.2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ 1) ಶ್ರೀರಾಮ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತ (2) ಭದ್ರಾ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತ (3) ಕರ್ನಾಟಕ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತ (4) ಶ್ರೀ ಹಾಲಸಿದ್ಧನಾಥ ಸಹಕಾರಿ ಸಕ್ಕರೆ ಕಾರ್ಖಾನೆಗಳಿಗೆ ಬಿಡುಗಡೆ ಮಾಡಿರುವ ₹100.00 ಲಕ್ಷ ಸಾಲವನ್ನು ಮರುಪಾವತಿಸುವ ಸಲುವಾಗಿ ಷರತ್ತು ಮತ್ತು ನಿಬಂಧನೆಗಳನ್ನು ಈ ಆದೇಶದ ಅನುಬಂಧದ ಪ್ರಕಾರ ವಿಧಿಸಲಾಗಿದೆ.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರ ದಿನಾಂಕ 24.03.2012ರ ವಾಕೈ 78 ಆಂಆಸ(1) 2012ರ ಟಿಪ್ಪಣಿ ಹಾಗೂ ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ FD 111 Exp–2/2012 ದಿನಾಂಕ 29.11.2012ರ ಮೂಲಕ ನೀಡಿರುವ ಸಹಮತದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಬಿ.ರಾಮಸ್ವಾಮಿ**
ಸರ್ಕಾರದ ಅಧೀನ ಕಾರ್ಯದರ್ಶಿ
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ (ಸಹಕಾರಿ ಸಕ್ಕರೆ)

**Annexure to the G.O.No.CI 92 SaSaKa 2011, dated 03.01.2013 Essential details of Loans sanctioned vide Government Orders No.CMW 72 COF 86, dated: 24.3.1988**

**LOANS AND ADVANCES BY STATE GOVERNMENT**

| | | | |
|---|---|---|---|
| . | Sanctioning Authority | Government of Karnataka | |
| 2. | Sanction (G.O.No. and date) | No.CMW 72 COF 86, dated: 24.3.1988 | |
| 3. | To whom sanctioned | (1)Shree Rama SSK/(2)Bhadra SSK/<br>(3)Karnataka SSK/(4)Halasiddanatha Sahakari Sakkare KarkhaneNiyamitha | |
| 4. | Amount sanctioned (in words and figures) | ₹100.00 (one hundred lakhs only) | |
| 5. | Sanction valid upto | Not applicable | |
| 6. | Purpose of the Loan | To clear over dues. | |
| 7. | Payable in cash or adjustment | Cash / Cheque | |
| 8. | Plan or Non-plan | Plan | |
| 9. | Head of Account to which the loan is debitable | 1) Sri Shree Rama SSK Ltd., Chunchana katte."6860-04-104-0-19"<br>2) Bhadra SSK Ltd., Doddabatthi. "6860-04-190-0-07"<br>3) Karnataka SSK Ltd., Haveri. "6860-04-190-1-11"<br>4) Halasiddanatha SSK Ltd., Nippani. "6860-04-190-1-11" | |
| 10. | Progressive amount of loan sanctioned to date in the financial year | G.O.No. and date | Amount (` in lakhs) |
| | | No.CMW 72 COF 86, dated:24.3.1988 | 100.00 |
| | | **Total** | 100.00 |
| 11. | Period of Loan | 10 years | |
| 12. | Moratorium towards repayment, if any | - Nil - | |
| 13. | Date and year from which repayment is to commence | Repayment will be made annually from the next financial year i.e. 1.4.1988 | |

| | | |
|---|---|---|
| 14. | Mode of repayment | By cheque or DD |
| 15. | Rate of interest | Interest free loan as per G.O. dated 24.3.1988 |
| 16. | Adjustment of over due loans, if any | ---- |
| 17. | Authority who countersigns the payee's receipt | Commissioner for Cane Development and Director of Sugar, Bangalore. |
| 18. | Authority who maintains loan ledger and watches recovery | Commissioner for Cane Development and Director of Sugar, Bangalore. |
| 19. | Authority responsible for reconciliation and monitoring of loan. | Commissioner for Cane Development and Director of Sugar, Bangalore. |
| 20. | Authority to whom utilisation certificates are to be given | Commissioner for Cane Development and Director of Sugar, Bangalore. |
| 21. | Authority who should furnish estimate of recovery of loan and interest for inclusion in the budget estimates. | Commissioner for Cane Development and Director of Sugar, Bangalore. |

**B.RAMASWAMY**
Under Secretary to Government
Commerce and Industries Department (Co-operative Sugar)

**PR.378**

## ಕಾರ್ಮಿಕ ಸಚಿವಾಲಯ

**ವಿಷಯ:** ಡಾ. ಬಸವರಾಜ್ ಎಸ್. ಗಂಗಾಲ್ ವೈದ್ಯಕೀಯ ಅಧೀಕ್ಷಕರು ಶ್ರೀ ಹೆಚ್.ಕೆ.ರಾಜಪ್ಪ ನಿವೃತ್ತ ಲೇ. ಕಾರ್ಯದರ್ಶಿಗಳು, ಶ್ರೀ ಜಿ.ಜಿ. ಭಂಡಿ ಕಛೇರಿ ಅಧೀಕ್ಷಕರು ಮತ್ತು ಶ್ರೀ ಪ್ರಶಾಂತ್ ಕುಮಾರ್ ಆರ್. ಹೊಸಳ್ಳಿ, ಗ್ರೂಪ್ ಡಿ ಕಾರ್ಮಿಕರ ರಾಜ್ಯ ವಿಮಾ ಆಸ್ಪತ್ರೆ, ಹುಬ್ಬಳ್ಳಿ ಇವರ ವಿರುದ್ಧ ಶಿಸ್ತು ಕ್ರಮ ಜರುಗಿಸುವ ಕುರಿತು.

**ಓದಲಾಗಿದೆ:** 1. ನಿರ್ದೇಶಕರು, ಕಾ.ರಾ.ವಿ.ಯೋ (ವೈ) ಸೇವೆಗಳು ರಾಜಾಜಿನಗರ, ಬೆಂಗಳೂರು ಇವರ ಪತ್ರ ಸಂಖ್ಯೆ: ಇಎಸ್ಐಎಸ್/ ಇವಿ/45/2009–10, ದಿನಾಂಕ: 18/29–09–2010., 11–02–2011., 24–05–2011., 07/01–08–2011.

2. ಸರ್ಕಾರದಿಂದ ಹೊರಡಿಸಲಾದ ನೋಟೀಸ್ ಮತ್ತು ದೋಷಾರೋಪಣೆ ಪಟ್ಟಿ ಸಂಖ್ಯೆ: ಕಾಇ 440 ಎಲ್ಎಸ್ಐ 2011, ದಿನಾಂಕ: 07–01–2012.

3. ಆರೋಪಿತ ಸರ್ಕಾರಿ ಅಧಿಕಾರಿ/ನೌಕರರು ಸಲ್ಲಿಸಿರುವ ರಕ್ಷಣಾ ಹೇಳಿಕೆ

(ಅ) ಡಾ. ಬಸವರಾಜ್ ಎಸ್. ಗಂಗಾಲ್ ವೈದ್ಯಕೀಯ ಅಧೀಕ್ಷಕರು ಇವರ ರಕ್ಷಣಾ ಹೇಳಿಕೆ ದಿನಾಂಕ: 21–02–2012.

(ಆ) ಶ್ರೀ ಹೆಚ್.ಕೆ. ರಾಜಪ್ಪ ನಿವೃತ್ತ ಲೇ.ಕಾರ್ಯದರ್ಶಿ ಇವರ ರಕ್ಷಣಾ ಹೇಳಿಕೆ ದಿನಾಂಕ: 23–02–2012.

(ಇ) ಶ್ರೀ ಜಿ.ಜಿ. ಭಂಡಿ ಕಛೇರಿ ಅಧೀಕ್ಷಕರು, ಇವರ ರಕ್ಷಣಾ ಹೇಳಿಕೆ ದಿನಾಂಕ: 24–02–2012.

(ಈ) ಶ್ರೀ ಪ್ರಶಾಂತ್ ಕುಮಾರ್ ಆರ್. ಹೊಸಳ್ಳಿ ಗ್ರೂಪ್ ಡಿ ಇವರ ರಕ್ಷಣಾ ಹೇಳಿಕೆ ದಿನಾಂಕ: 22–02–2012.

4. ನಿರ್ದೇಶಕರು ಕಾ.ರಾ.ವಿ.ಯೋ(ವೈ) ಸೇವೆಗಳು, ರಾಜಾಜಿನಗರ, ಬೆಂಗಳೂರು ಇವರ ಪತ್ರ ಸಂಖ್ಯೆ: ಇಎಸ್ಐಎಸ್/ ಇ.ವಿ/45/2009–10. ದಿನಾಂಕ: 18/23–04–2012.

5. ಸರ್ಕಾರದ ಪತ್ರ ಸಂಖ್ಯೆ: ಕಾಇ 440 ಎಲ್ಎಸ್ಐ 2011, ದಿನಾಂಕ: 11–06–2012.

6. ನಿರ್ದೇಶಕರು ಕಾ.ರಾ.ವಿ.ಯೋ (ವೈ)ಸೇವೆಗಳು, ರಾಜಾಜಿನಗರ, ಬೆಂಗಳೂರು ಇವರ ಪತ್ರ ಸಂಖ್ಯೆ: ಇಎಸ್ಐಎಸ್ /ಇ.ವಿ/45/2009–10, ದಿನಾಂಕ: 22–08–2012.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಪತ್ರಗಳಲ್ಲಿ ಶ್ರೀ ಪ್ರಶಾಂತ್ ಕುಮರ್ ಆರ್. ಹೊಸಳ್ಳಿ ಗ್ರೂಪ್ ಡಿ ಕಾ.ರಾ.ವಿ. ಆಸ್ಪತ್ರೆ ಹುಬ್ಬಳ್ಳಿ ಇವರಿಗೆ ಸಂಬಂಧಿಸಿದ ಗಳಿಕೆರಜೆ ನಗಧೀಕರಣ ಮೊತ್ತ, ಜೂನ್,ಜುಲೈ 2009ರ ವೇತನ ಮುಂತಾದ ತಮಗೆ ಬರಬೇಕಾದ ವೇತನ ಸೌಲಭ್ಯಗಳನ್ನು ವಿತರಿಸಿರುವುದಿಲ್ಲವೆಂದು ದೂರು ಸಲ್ಲಿಸಿದ ಹಿನ್ನಲೆಯಲ್ಲಿ ನಿರ್ದೇಶಕರು ಕಾ.ರಾ.ವಿ.ಯೋ(ವೈ)ಸೇವೆಗಳು ಇವರ ಆದೇಶದನ್ವಯ ನಿರ್ದೇಶನಾಲಯದ ಆಡಳಿತಾಧಿಕಾರಿಯಾದ ಶ್ರೀಮತಿ ಗಿರಿಜಾ ಹೆಚ್. ಕೊಂಗಿ ಮತ್ತು ಲೇಖಾಧಿಕಾರಿಯವರಾದ ಶ್ರೀ ಕೆ.ಆರ್. ರಮೇಶ್, ಇವರುಗಳನ್ನೊಳಗೊಂಡ ಅಧಿಕಾರಿ ತಂಡವು ಪ್ರಾಥಮಿಕ ವಿಚಾರಣೆಯನ್ನು ಕೈಗೊಂಡು ವರದಿಯನ್ನು ಸಲ್ಲಿಸಿರುತ್ತಾರೆ.

ವೈದ್ಯಕೀಯ ಅಧೀಕ್ಷಕರಾದ ಡಾ. ಬಸವರಾಜ್ ಎಸ್. ಗಂಗಾಲ್ ಇವರು ತಮ್ಮ ಹೆಸರಿನಲ್ಲಿರುವ ಬ್ಯಾಂಕ್ ಖಾತೆಯನ್ನು ನಿಯಮಾನುಸಾರ ಸಮರ್ಪಕವಾಗಿ ನಿರ್ವಹಿಸದಿರುವುದು ಆಗಿಂದಾಗ್ಗೆ ಪರಿಶೀಲಿಸದಿರುವುದು ಮತ್ತು ತಮ್ಮ ಅಧೀನದಲ್ಲಿರುವ ಸಿಬ್ಬಂದಿ ವರ್ಗದವರ ಮೇಲೆ ಉಸ್ತುವಾರಿ ಹಾಗೂ ನಿಯಂತ್ರಣವಿಲ್ಲದಿರುವುದು ಪ್ರಾಥಮಿಕ ವಿಚಾರಣೆಯಿಂದ ಕಂಡುಬಂದಿದ್ದು ಈ ಮೂಲಕ ಆಡಳಿತ ವೈಫಲ್ಯತೆ ಹೊಂದಿರುತ್ತಾರೆಂದು ತಿಳಿಸಿರುತ್ತಾರೆ. ಲೇ–ಕಾರ್ಯದರ್ಶಿಗಳಾದ ಶ್ರಿ ಹೆಚ್. ಕೆ. ರಾಜಪ್ಪ ಇವರು ಬಟವಾಡೆ ಅಧಿಕಾರಿಯಾಗಿ ಕರ್ನಾಟಕ ಆರ್ಥಿಕ ಸಂಹಿತೆ ನಿಯಮಗಳಡಿ ಕಾರ್ಯನಿರ್ವಹಿಸದೆ ನೌಕರರಿಗೆ ಪಾವತಿಸಬೇಕಾದ ಮೊತ್ತವನ್ನು ಸಂದಾಯ ಮಾಡದೆ ವೈದ್ಯಕೀಯ ಅಧೀಕ್ಷಕರ ಖಾತೆಗೆ ಜಮೆ ಮಾಡುವುದರ ಮೂಲಕ ಕರ್ತವ್ಯ ಲೋಪವೆಸಗಿರುತ್ತಾರೆ. ಕಛೇರಿ ಅಧೀಕ್ಷಕರಾದ ಶ್ರೀ ಜಿ.ಜಿ.ಭಂಡಿ ಇವರು ಶ್ರೀ ಪ್ರಶಾಂತ್‌ಕುಮಾರ್ ಆರ್. ಹೊಸಳ್ಳಿ ಇವರಿಗೆ ಸಂಬಂಧಿಸಿದ ಮೊತ್ತವನ್ನು ವಿಳಂಬವಾಗಿ ಬಟವಾಡೆ ಮಾಡಿರುವುದು ಕರ್ನಾಟಕ ಆರ್ಥಿಕ ಸಂಹಿತೆಯ ಕಲಂ 369, 383, 384, ಮತ್ತು 386ರಡಿ ತಾತ್ಕಲಿಕ ಸರ್ಕಾರಿ ಹಣ

ದುರುಪಯೋಗಪಡಿಸಿಕೊಂಡಿರುವುದು ಮೇಲ್ನೋಟಕ್ಕೆ ಕಂಡುಬರುವುದಾಗಿ ಹಾಗೂ ಕರ್ತವ್ಯಚ್ಯುತಿ, ಬೇಜವಾಬ್ದಾರಿಯಂತಹ ದುರ್ನಡತೆಯನ್ನು ಎಸಗಿರುತ್ತಾರೆ. ಗ್ರೂಪ್ ಡಿ ನೌಕರರಾದ ಶ್ರೀ ಪ್ರಶಾಂತ್ ಕುಮಾರ್ ಆರ್. ಹೊಸಳ್ಳಿ ಇವರು ಸರ್ಕಾರಿ ಕಛೇರಿಗೆ ಹೊರಗಿನ ವ್ಯಕ್ತಿಗಳನ್ನು ಕರೆದುಕೊಂಡು ಬಂದು ಗದ್ದಲವನ್ನುಂಟು ಮಾಡುವುದು, ಅಂಬ್ಯುಲೆನ್ಸ್ ವಾಹನವನ್ನು ತಡೆಯಲು ಪ್ರಚೋದಿಸುವುದು ಮುಂತಾಗಿ ಕರ್ತವ್ಯ ಲೋಪವೆಸಗಿದ್ದು ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಗಳು, 1966ರ ನಿಯಮ 3 ಹಾಗೂ 6 (2) ನಿಯಮಗಳನ್ನು ಉಲ್ಲಂಘಿಸಿರುತ್ತಾರೆಂದು ತಿಳಿಸಿ, ಸದರಿ ಅಧಿಕಾರಿ ಮತ್ತು ನೌಕರರು ಜಂಟಿಯಾಗಿ ಜವಾಬ್ದಾರಿ ಹೊಂದಿರುವುದರಿಂದ ಮತ್ತು ಕರ್ತವ್ಯ ಲೋಪವೆಸಗಿರುವುದರಿಂದ ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಗಳು 1957ರ ನಿಯಮ 13ರಡಿ ಶಿಸ್ತು ಕ್ರಮ ಕೈಗೊಳ್ಳುವಂತೆ ಕೋರಿ ಕರಡು ದೋಷಾರೋಪಣೆ ಪಟ್ಟಿಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಶ್ರೀ ಪ್ರಶಾಂತ್‌ಕುಮಾರ್ ಆರ್. ಹೊಸಳ್ಳಿ ಗ್ರೂಪ್ ಡಿ ಇವರ ಜೂನ್ ಮತ್ತು ಜುಲೈ 2009ರ ಒಟ್ಟು ವೇತನವನ್ನು ನೌಕರರಿಗೆ ಪಾವತಿಸದೆ ವೈದ್ಯಕೀಯ ಅಧೀಕ್ಷಕರ ಖಾತೆಗೆ ಜಮೆ ಮಾಡಿ ಸದರಿ ಮೊತ್ತದಲ್ಲಿ ₹ 7,325/–ಗಳನ್ನು ಜಿಇಸಿ ಬ್ಯಾಂಕ್ ಧಾರವಾಡ ಇಲ್ಲಿಗೆ ಸದರಿ ನೌಕರರು ಪಡೆದ ಸಾಲಕ್ಕೆ ಪಾವತಿಸಿ ಉಳಿಕೆ ಮೊತ್ತ ₹ 873/–ಗಳನ್ನು ಮಾತ್ರ ನೌಕರರ ಖಾತೆಗೆ ತಿಂಗಳ ನಂತರ ಜಮೆ ಮಾಡಿರುವುದು ಶ್ರೀ ಪ್ರಶಾಂತ್ ಕುಮಾರ್ ಆರ್. ಹೊಸಳ್ಳಿ ಇವರಿಗೆ ಗಳಿಕೆ ರಜೆ ನಗಧೀಕರಣ ಮೊತ್ತ ₹ 7468/–ಗಳನ್ನು ಹೊರಗಿನ ವ್ಯಕ್ತಿಗಳನ್ನು ಕರೆದುಕೊಂಡು ಗದ್ದಲ ಮಾಡಿದಾಗ ಪಾವತಿಸಿರುವುದು, 2009ರ ಸ್ವಾತಂತ್ರ್ಯ ದಿನಾಚರಣೆ ಸಂದರ್ಭದಲ್ಲಿ ಹಬ್ಬದ ಮುಂಗಡವನ್ನು ಎಲ್ಲಾ ನೌಕರರಿಗೆ ಬಟವಾಡೆ ಮಾಡಿರುವಂತೆ ಸದರಿ ನೌಕರರಿಗೆ ಬಟವಾಡೆ ಮಾಡದೆ ವೈದ್ಯಕೀಯ ಅಧೀಕ್ಷಕರವರ ಬ್ಯಾಂಕಿನ ಖಾತೆಗೆ ಜಮೆ ಮಾಡಿರುವುದು ಈ ಮುಂತಾದ ಆರೋಪಗಳು ಗುರುತರವಾದ ದುರ್ನಡತೆಯಿಂದ ಕೂಡಿದ್ದು ಕರ್ನಾಟಕ ಆರ್ಥಿಕ ಸಂಹಿತೆ 369, 383, 384, ಮತ್ತು 386ಗಳನ್ನು ಉಲ್ಲಂಘಿಸಿರುವುದು ಮತ್ತು ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಗಳು 1966ರ ನಿಯಮ 3ರ ಉಪನಿಯಮ (i) (ii) (iii)ಗಳನ್ನು ಡಾ. ಬಸವರಾಜ್ ಎಸ್. ಗಂಗಾಲ್ ವೈದ್ಯಕೀಯ ಅಧೀಕ್ಷಕರು ಶ್ರೀ ಹೆಚ್.ಕೆ. ರಾಜಪ್ಪ ಹಿಂದಿನ ಲೇ–ಕಾರ್ಯದರ್ಶಿಗಳು ಮತ್ತು ಶ್ರೀ ಜಿ.ಜಿ.ಭಂಡಿ ಕಛೇರಿ ಅಧೀಕ್ಷಕರು ಕಾ.ರಾ.ವಿ. ಆಸ್ಪತ್ರೆ ಹುಬ್ಬಳ್ಳಿ ಇವರುಗಳು ತಮ್ಮ ತಮ್ಮ ಹುದ್ದೆಗಳನ್ನು ಸಮರ್ಪಕವಾಗಿ ನಿರ್ವಹಿಸದೆ ಕರ್ತವ್ಯ ಲೋಪವೆಸಗಿ ಮೇಲ್ಕಂಡ ನಿಯಮಗಳನ್ನು ಉಲ್ಲಂಘನೆ ಮಾಡಿರುತ್ತಾರೆ. ಶ್ರೀ **ಪ್ರಶಾಂತ್‌ಕುಮಾರ್ ಆರ್. ಹೊಸಳ್ಳಿ ಗ್ರೂಪ್ ಡಿ ಇವರು ಕಾ.ರಾ.ವಿ. ಆಸ್ಪತ್ರೆ ಹುಬ್ಬಳ್ಳಿ ಇವರು ದಿನಾಂಕ: 17**–11–2009 ಮತ್ತು 22–12–2009ರಂದು ಕುಟುಂಬ ಸದಸ್ಯರೊಂದಿಗೆ ಧರಣಿ ಮಾಡಿ ಅಲ್ಲಿನ ವಿಮಾ ರೋಗಿಗಳಿಗೆ ತೊಂದರೆ ಉಂಟು ಮಾಡಿರುವುದಲ್ಲದೆ ಆಸ್ಪತ್ರೆಯ ದೈನಂದಿನ ಕೆಲಸ ಕಾರ್ಯಗಳಿಗೆ ಅಡಚಣೆ ಉಂಟುಮಾಡಿರುತ್ತಾರೆ.

ಈ ಮೂಲಕ ಸರ್ಕಾರಿ ನಿಯಮಗಳನ್ನು ಮೀರಿ ಧರಣಿ ನಡೆಸುವುದರ ಮುಖಾಂತರ ಹಾಗೂ ಆಸ್ಪತ್ರೆಯ ಅಂಬ್ಯುಲೆನ್ಸ್ ವಾಹನವನ್ನು ಸದರಿ ನೌಕರರೊಂದಿಗೆ ಧರಣಿ ನಡೆಸಲು ಬಂದಿದ್ದ ವ್ಯಕ್ತಿಗಳು ತಡೆದು ಸರ್ಕಾರಿ ಕೆಲಸಕ್ಕೆ ಭಂಗವನ್ನುಂಟುಮಾಡಲು ಕಾರಣರಾಗಿರುತ್ತಾರೆ. ಇಂತಹ ಅನುಚಿತ ವರ್ತನೆಯು ಅತ್ಯಂತ ಗುರುತರವಾದ ದುರ್ವರ್ತನೆಯಾಗಿದ್ದು ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಗಳು 1966ರ ನಿಯಮ 3ರ ಉಪನಿಯಮ (i), (ii), (iii)ಗಳನ್ನು ಉಲ್ಲಂಘಿಸಿರುತ್ತಾರೆ. ಸರ್ಕಾರಿ ನೌಕರನು ಸರ್ಕಾರದ ವ್ಯವಸ್ಥೆಯ ವಿರುದ್ಧ ಯಾವುದೇ ಸಂದರ್ಭದಲ್ಲಿ ಧರಣಿ ನಡೆಸುವುದು ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಗಳು 1966ರ ನಿಯಮ 3 ಹಾಗೂ 6 (3)ಗಳನ್ನು ಉಲ್ಲಂಘಿಸಿರುವುದಾಗಿ ತಿಳಿಸಿ ದೋಷಾರೋಪಣೆ ಪಟ್ಟಿಯಲ್ಲಿ ಆರೋಪ ಮಾಡಿ ಕಾರಣ ಕೇಳುವ ನೋಟೀಸ್‌ನೊಂದಿಗೆ ದೋಷಾರೋಪಣಾ ಪಟ್ಟಿಯನ್ನು ಸಂಬಂಧಿಸಿದ ಆರೋಪಿತ ಸರ್ಕಾರಿ ಅಧಿಕಾರಿ ಮತ್ತು ನೌಕರರಿಗೆ ಮೇಲೆ ಓದಲಾದ (2)ರಲ್ಲಿ ಜಾರಿ ಮಾಡಿ ರಕ್ಷಣಾ ಹೇಳಿಕೆಯನ್ನು ನೋಟೀಸ್ ತಲುಪಿದ 15 ದಿವಸಗಳೊಗಾಗಿ ಸರ್ಕಾರಕ್ಕೆ ಸಲ್ಲಿಸುವಂತೆ ಆದೇಶಿಸಲಾಯಿತು.

ಮೇಲೆ ಓದಲಾದ (3)ರಲ್ಲಿ ಆರೋಪಿತ ಸರ್ಕಾರಿ ಅಧಿಕಾರಿ ಮತ್ತು ನೌಕರರು ಈ ಕೆಳಕಂಡಂತೆ ತಮ್ಮ ರಕ್ಷಣಾ ಹೇಳಿಕೆಯನ್ನು ಸಲ್ಲಿಸಿರುತ್ತಾರೆ.

(ಅ) **ಡಾ. ಬಸವರಾಜ್ ಎಸ್. ಗಂಗಾಲ್ ವೈದ್ಯಕೀಯ ಅಧೀಕ್ಷಕರು:**

ಕಾ.ರಾ.ವಿ. ಆಸ್ಪತ್ರೆ ಹುಬ್ಬಳ್ಳಿ ಇಲ್ಲಿನ ಆಡಳಿತವು ಸುಗಮವಾಗಿ ನಡೆಸುವ ದೃಷ್ಟಿಯಿಂದ ವೈದ್ಯಕೀಯ ಅಧೀಕ್ಷಕ ಮತ್ತು ಲೇ–ಕಾರ್ಯದರ್ಶಿಯವರ ಹೆಸರಿನಲ್ಲಿ ಜಂಟಿಯಾಗಿ ಬ್ಯಾಂಕಿನ ವ್ಯವಹರಣೆಗಾಗಿ ಜಂಟಿ ಖಾತೆಯನ್ನು ತೆರೆಯಲಾಗಿದೆ. ಇ.ಎನ್.ಟಿ. ತಜ್ಞರಾದ ತಾವು ರೋಗಿಗಳ ಚಿಕಿತ್ಸೆ/ಔಷಧೋಪಚಾರ ನೀಡುವುದು, ಆಸ್ಪತ್ರೆಯ ಆಡಳಿತವು ಸುಗಮವಾಗಿ ಸಾಗುವುದಕ್ಕೆ ವೈದ್ಯಾಧಿಕಾರಿಗಳ/ ಸಿಬ್ಬಂದಿಗಳ ಸಭೆಗಳನ್ನು ಏರ್ಪಡಿಸಿ ಸಲಹೆ ಸೂಚನೆ ನೀಡುವುದು ಸೇರಿದಂತೆ, ಆಡಳಿತವನ್ನು ಸಮರ್ಪಕವಾಗಿ ನಿರ್ವಹಿಸುತ್ತಿದ್ದೇನೆ.

(ಆ) **ಹೆಚ್.ಕೆ. ರಾಜಪ್ಪ ನಿವೃತ್ತ ಲೇ–ಕಾರ್ಯದರ್ಶಿ** :

ಲೇ–ಕಾರ್ಯದರ್ಶಿ ಹುದ್ದೆಗೆ ನಿಗದಿಪಡಿಸಿದ ಕರ್ತವ್ಯ ಮತ್ತು ಹೊಣೆಗಾರಿಕೆಯಂತೆ ಹಣ ಸೆಳೆಯುವ ಮತ್ತು ಬಟವಾಡೆ ಅಧಿಕಾರಿಯಾಗಿ ಕಾರ್ಯನಿರ್ವಹಿಸುತ್ತಿದ್ದೇನೆ. ಶ್ರೀ ಪ್ರಶಾಂತ್‌ಕುಮಾರ್ ಆರ್. ಹೊಸಳ್ಳಿ ಗ್ರೂಪ್ ಡಿ ಇವರು ಜಿ.ಇ.ಸಿ.ಬ್ಯಾಂಕ್ ಧಾರವಾಡ ಇಲ್ಲಿಂದ ಪಡೆದ ಸಾಲವನ್ನು ಸಕಾಲಕ್ಕೆ ಮರುಪಾವತಿಸದೆ ಸುಸ್ಥಿದಾರರಾಗಿದ್ದರಿಂದ ಬ್ಯಾಂಕಿನ ಅಧಿಕಾರಿಗಳು ಸದರಿ ಮೊತ್ತವನ್ನು ಬ್ಯಾಂಕಿಗೆ ಪಾವತಿಸುವ ಬಗ್ಗೆ ಕ್ರಮ ಕೈಗೊಳ್ಳುವಂತೆ ಕೋರಿದ್ದರ ಹಿನ್ನಲೆಯಲ್ಲಿ ಸದರಿ ನೌಕರರ ವೇತನದಿಂದ ಕಟಾಯಿಸಿ ಬ್ಯಾಂಕಿಗೆ ಪಾವತಿಸುವ ಕ್ರಮಕೈಗೊಳ್ಳಲಾಗಿದೆ. ಅದರಂತೆ ಆಗಸ್ಟ್ 2009ರವರೆಗಿನ ಬಾಕಿ ₹ 6396/– ಮತ್ತು ಸೆಪ್ಟೆಂಬರ್ 2009ರ ಮಾಸಿಕ ಕಂತು ₹ 2136/–ಒಟ್ಟು ₹ 8532/–ಗಳ ಪೈಕಿ ₹ 7325/–ಗಳನ್ನು ಮಾತ್ರ ಕಠಾಯಿಸಿ ಉಳಿಕೆ ಮೊತ್ತವನ್ನು ಸದರಿ ನೌಕರರಿಗೆ ಪಾವತಿಸಿದೆ. ಗಳಿಕೆ ರಜೆ ನಗದೀಕರಿಣದ ಮೊತ್ತ ₹ 7468/– ಮತ್ತು ಹಬ್ಬದ ಮುಂಗಡ ₹ 3500/–ಗಳನ್ನು ಸಹ ಪಾವತಿಸಲಾಗಿದ್ದು ಸದರಿ ಮೊತ್ತವನ್ನು ಪಡೆದ ಬಗ್ಗೆ ಬಟವಾಡೆ ಪುಸ್ತಕದಲ್ಲಿ ಸಹಿ ಮಾಡಿರುತ್ತಾರೆ. ಲೇ–ಕಾರ್ಯದರ್ಶಿಯಾಗಿ ವೈದ್ಯಕೀಯ ಅಧೀಕ್ಷಕರ ಆದೇಶದಂತೆ ಮತ್ತು ಬ್ಯಾಂಕಿನ ವ್ಯವಸ್ಥಾಪಕರ ಕೋರಿಕೆಯಂತೆ ಬಾಕಿಯಿರುವ ಸಾಲದ ಮೊತ್ತವನ್ನು ಕಟಾಯಿಸುವ ಕ್ರಮ ಕೈಗೊಳ್ಳಲಾಗಿದ್ದು ಶ್ರೀ ಪ್ರಶಾಂತ್‌ಕುಮಾರ್ ಆರ್. ಹೊಸಳ್ಳಿರವರ ವೇತನವನ್ನಾಗಲೀ ಅಥವಾ ಸರ್ಕಾರಿ ಹಣವನ್ನಾಗಲೀ ದುರುಪಯೋಗಪಡಿಸಿಕೊಂಡಿರುವುದಿಲ್ಲವೆಂದು ತಿಳಿಸಿರುತ್ತಾರೆ.

(ಇ) **ಶ್ರೀ ಜಿ.ಜಿ.ಭಂಡಿ ಕಛೇರಿ ಅಧೀಕ್ಷಕರು:**

ವೈದ್ಯಕೀಯ ಅಧೀಕ್ಷಕರವರ ದೈನಂದಿನ ಆಡಳಿತದಲ್ಲಿ ಸಹಾಯಕವಾಗಲು ಮತ್ತು ಸುಗಮವಾಗಿ ಬ್ಯಾಂಕಿನ ಆಸ್ಪತ್ರೆಗೆ ಸಂಬಂಧಿಸಿದಂತೆ ಬ್ಯಾಂಕಿನ ವ್ಯವಹಾರಣೆಗಳನ್ನು ನೋಡಿಕೊಳ್ಳುವುದಕ್ಕಾಗಿ ಜಂಟಿ ಖಾತೆಯನ್ನು ತೆರೆಯಲಾಗಿದೆ. ಶ್ರೀ ಪ್ರಶಾಂತ್ ಕುಮಾರ್ ಆರ್. ಹೊಸಳ್ಳಿ ಇವರು ಜಿ.ಇ.ಸಿ. ಬ್ಯಾಂಕ್ ಧಾರವಾಡ ಇಲ್ಲಿಂದ ಪಡೆದ ಸಾಲವನ್ನು ಸಕಾಲಕ್ಕೆ ತೀರಿಸದೆ ಸುಸ್ಥಿದಾರರಾಗಿದ್ದರಿಂದ ಬ್ಯಾಂಕಿನ ವ್ಯವಸ್ಥಾಪಕರ ಕೋರಿಕೆ ಮತ್ತು ವೈದ್ಯಕೀಯ ಅಧೀಕ್ಷಕರ ಲಿಖಿತ ಆದೇಶದನುಸಾರ ಸದರಿ ನೌಕರರ ವೇತನದಿಂದ ಸಾಲದ ಕಂತನ್ನು ಕಟಾಯಿಸುವ ಬಗ್ಗೆ ಕ್ರಮ ಕೈಗೊಳ್ಳಲಾಗಿದೆ. ಇಸಿಎಸ್‌ನ ಪದ್ಧತಿಯಿಂದಾಗಿ ನೌಕರರ ವೈಯಕ್ತಿಕ ಖಾತೆಗೆ ಸಂಬಳವು ಜಮೆಯಾಗುತ್ತಿದ್ದುದರಿಂದ ಸದರಿ ಜಮೆಯಾದ ಮೊತ್ತವು ಬ್ಯಾಂಕಿಗೆ ಪಾವತಿಸದೇ ಇದುದ್ದರಿಂದ ಬ್ಯಾಂಕಿನ

ನಿಯಮಗಳು ಮತ್ತು ಕರಾರು ಒಪ್ಪಂದಗಳ ಉಲ್ಲಂಘನೆಯಾಗದಿರುವಂತೆ ಸದರಿ ನೌಕರರ ವೇತನವನ್ನು ವೈದ್ಯಕೀಯ ಅಧೀಕ್ಷಕರ ಜಂಟಿ ಖಾತೆಗೆ ಜಮೆ ಮಾಡಿ ಸಾಲದ ಕಂತನ್ನು ಬ್ಯಾಂಕಿಗೆ ಪಾವತಿಸುವ ಕ್ರಮ ಕೈಗೊಂಡಿರುತ್ತದೆ. ಗಳಿಕೆ ರಜೆಯ ನಗದೀಕರಣ ಮೊತ್ತ ₹ 7468/– ಮತ್ತು ಹಬ್ಬದ ಮುಂಗಡ ₹ 3500/–ಗಳನ್ನು ಸದರಿ ನೌಕರರು ಪಡೆದು ಬಟವಾಡೆ ಪುಸ್ತಕದಲ್ಲಿ ಸಹಿ ಮಾಡಿರುತ್ತಾರೆ. ಆದ್ದರಿಂದ ಸದರಿಯವರ ನೌಕರರ ವೇತನವನ್ನಾಗಲಿ, ಅಥವಾ ಸರ್ಕಾರಿ ಹಣವನ್ನಾಗಲೀ ದುರುಪಯೋಗಪಡಿಸಿಕೊಂಡಿರುವುದಿಲ್ಲ ಮತ್ತು ಸರ್ಕಾರಕ್ಕೆ ಆರ್ಥಿಕ ನಷ್ಟವುಂಟುಮಾಡಿರುವುದಿಲ್ಲ.

**(ಈ) ಶ್ರೀ ಪ್ರಶಾಂತ್‌ಕುಮಾರ್ ಆರ್. ಹೊಸಳ್ಳಿ ಗ್ರೂಪ್ ಡಿ**

ಜೂನ್ ಮತ್ತು ಜುಲೈ 2009ರ ಮಾಹೆಯ ಸಂಬಳವನ್ನು ತನಗೆ ವಿತರಿಸದೆ ವೈದ್ಯಕೀಯ ಅಧೀಕ್ಷಕರ ಖಾತೆಗೆ ಜಮೆ ಮಾಡಿ ಮಾನಸಿಕವಾಗಿ ಮತ್ತು ದೈಹಿಕವಾಗಿ ಕಿರುಕುಳವನ್ನು ನೀಡಿದವರ ವಿರುದ್ಧ ಕ್ರಮ ಕೈಗೊಳ್ಳಲು ನಿರ್ದೇಶನಾಲಯಕ್ಕೆ ಹಾಗೂ ಸಂಬಂಧಪಟ್ಟ ಇಲಾಖೆಗೆ ದೂರು ಸಲ್ಲಿಸಿದ್ದರೂ ಯಾವುದೇ ಕ್ರಮ ಕೈಗೊಳ್ಳದಿದ್ದಾಗ ಸದರಿ ವ್ಯವಸ್ಥೆಯ ವಿರುದ್ಧ ಧರಣಿ ಮಾಡಲಾಗಿದೆಯೆಂದು ಆದರೆ ಸರ್ಕಾರದ ವಿರುದ್ಧ ಧರಣಿ ಮಾಡಿರುವುದಿಲ್ಲವೆಂದು ಈ ಸಂಧರ್ಭದಲ್ಲಿ ಹೊರಗಿನ ವ್ಯಕ್ತಿಗಳನ್ನು ಕರೆತಂದಿರುವುದಿಲ್ಲವೆಂದು ತಿಳಿಸಿರುತ್ತಾರೆ.

ನಿರ್ದೇಶಕರು ಕಾರಾವಿಯೋ(ವೈ)ಸೇವೆಗಳು ಇವರು ಮೇಲೆ ಓದಲಾದ (4)ರ ತಮ್ಮ ಪತ್ರದಲ್ಲಿ ಆರೋಪಿತ ಸರ್ಕಾರಿ ಅಧಿಕಾರಿ ಮತ್ತು ಇತರೆ ನೌಕರರುಗಳು ಸಲ್ಲಿಸಿರುವ ರಕ್ಷಣಾ ಹೇಳಿಕೆಯನ್ನು ಪರಿಶೀಲಿಸಿ ಶಿಸ್ತು ಪ್ರಾಧಿಕಾರಿಯಾದ ಸರ್ಕಾರವು ಸೂಕ್ತ ಆದೇಶವನ್ನು ಹೊರಡಿಸುವಂತೆ ಸರ್ಕಾರವನ್ನು ಕೋರಿರುತ್ತಾರೆ.

ಶ್ರೀ ಪ್ರಶಾಂತ್‌ಕುಮಾರ್ ಆರ್. ಹೊಸಳ್ಳಿ ಗ್ರೂಪ್ ಡಿ ಹಾಗೂ ಆರೋಪಿತ ಸರ್ಕಾರಿ ನೌಕರರು ಕಾ.ರಾ.ವಿ. ಆಸ್ಪತ್ರೆ, ಹುಬ್ಬಳ್ಳಿ ಇವರು ಜಿಇಸಿ ಬ್ಯಾಂಕ್ ಧಾರವಾಡ ಇಲ್ಲಿಂದ ಪಡೆದ ಸಾಲದ ಮತ್ತು ಕಡಿತಗೊಳಿಸಲಾದ ಮೊತ್ತದ ಬಗ್ಗೆ ಮಾಹಿತಿಯನ್ನು ಸರ್ಕಾರಕ್ಕೆ ಕೂಡಲೇ ಸಲ್ಲಿಸುವಂತೆ ಮೇಲೆ ಓದಲಾದ (5)ರಲ್ಲಿ ಸರ್ಕಾರದ ಪತ್ರದಲ್ಲಿ ಕೋರಲಾಯಿತು.

ನಿರ್ದೇಶಕರು ಕಾ.ರಾ.ವಿ.ಯೋ (ವೈ) ಸೇವೆಗಳು ಬೆಂಗಳೂರು ಇವರು ಮೇಲೆ ಓದಲಾದ (6)ರ ತಮ್ಮ ಪತ್ರದಲ್ಲಿ ವೈದ್ಯಕೀಯ ಅಧೀಕ್ಷಕರು ಕಾ.ರಾ.ವಿ. ಆಸ್ಪತ್ರೆ ಹುಬ್ಬಳ್ಳಿ ಇವರು ಶ್ರೀ ಪ್ರಶಾಂತ್‌ಕುಮಾರ್ ಆರ್. ಹೊಸಳ್ಳಿ ಗ್ರೂಪ್ ಡಿ ಇವರು ಸಾಲದ ಕಂತನ್ನು ವೇತನದಿಂದ ಕಟಾಯಿಸಿದ ಬಗ್ಗೆ ಮತ್ತು ಜಿಇಸಿ ಬ್ಯಾಂಕ್ ಧಾರವಾಡ ಇಲ್ಲಿಗೆ ಪಾವತಿಸಿದ ಬಗ್ಗೆ ದಾಖಲೆಗಳನ್ನೊಳಗೊಂಡ ವಿವರಗಳನ್ನು ಒದಗಿಸಿರುತ್ತಾರೆ.

ಆರೋಪಿತ ಸರ್ಕಾರಿ ಅಧಿಕಾರಿ ಮತ್ತು ನೌಕರರ ರಕ್ಷಣಾ ಹೇಳಿಕೆಯನ್ನು, ಪೂರಕ ದಾಖಲೆಗಳನ್ನು ಸರ್ಕಾರವು ಕೂಲಂಕೂಷವಾಗಿ ಪರಿಶೀಲಿಸಿ ಡಾ. ಬಸವರಾಜ್ ಎಸ್. ಗಂಗಾಲ್ ವೈದ್ಯಕೀಯ ಅಧೀಕ್ಷಕರು ಕಾರಾವಿ ಆಸ್ಪತ್ರೆ ಹುಬ್ಬಳ್ಳಿ ಇಲ್ಲಿಯ ಸಂಪೂರ್ಣ ಆಡಳಿತ ಪ್ರಭಾರವನ್ನು ಹೊಂದಿದ್ದರೂ ಸಹ ತಮ್ಮ ಕಾರ್ಯಾಲಯದ ಲೆಕ್ಕ ಪತ್ರ ವಿಭಾಗದ ಮೇಲುಸ್ತುವಾರಿಯನ್ನು ನೋಡಿಕೊಳ್ಳುವಲ್ಲಿ ಮತ್ತು ಗ್ರೂಪ್ ಡಿ ನೌಕರರ ದುರ್ವನತೆಯನ್ನು ನಿಯಂತ್ರಿಸುವಲ್ಲಿ ವಿಫಲರಾಗಿರುತ್ತಾರೆ. ಶ್ರೀ ಹೆಚ್.ಕೆ. ರಾಜಪ್ಪ ಲೇ. ಕಾರ್ಯದರ್ಶಿಯವರು ಲೆಕ್ಕ ಪತ್ರ ವಿಭಾಗಕ್ಕೆ ಸಂಬಂಧಿಸಿದ ಅಧಿಕಾರಿಯಾಗಿದ್ದು ಜಿಇಸಿ ಬ್ಯಾಂಕಿನಿಂದ, ಅಥವಾ ಇತರೆ ಬ್ಯಾಂಕುಗಳಿಂದ ಸಾಲವನ್ನು ಪಡೆಯುವಂತಹ ನೌಕರರುಗಳಿಗೆ ಅವರ ವೇತನದ ಶೇ.50ರಷ್ಟು ವೇತನವನ್ನು ಪಡೆಯುತ್ತಾರೆಂಬುದನ್ನು ಪರಿಶೀಲಿಸಿ ವೇತನ ಪ್ರಮಾಣ ಪತ್ರವನ್ನು ನೀಡುವಲ್ಲಿ, ಮತ್ತು ಪ್ರತಿ ತಿಂಗಳು ಬ್ಯಾಂಕಿನಿಂದ ಸಾಲ ಪಡೆದಂತಹ ನೌಕರರು ಸಕಾಲಕ್ಕೆ ಸರಿಯಾಗಿ ಮರುಪಾವತಿಸುತ್ತಿದ್ದಾರೆಯೇ ಇಲ್ಲವೆ ಎಂಬುವುದನ್ನು ಖಾತ್ರಿ ಪಡಿಸಿಕೊಳ್ಳದೆ ಕರ್ತವ್ಯ ಲೋಪವೆಸಗಿರುತ್ತಾರೆ.

ಶ್ರೀ ಜಿ.ಜಿ.ಭಂಡಿ ಕಛೇರಿ ಅಧೀಕ್ಷಕರು ಇವರು ಸಹ ಲೇ–ಕಾರ್ಯದರ್ಶಿಯವರ ಗಮನಕ್ಕೆ ಇಂತಹ ವಿಷಯಗಳನ್ನು ಕಾಲಕಾಲಕ್ಕೆ ತರದೆ ತಮ್ಮ ಕರ್ತವ್ಯದಲ್ಲಿ ನಿರ್ಲಕ್ಷತೆಯನ್ನು ತೋರಿರುತ್ತಾರೆ. ಶ್ರೀ ಪ್ರಶಾಂತ್ ಕುಮಾರ್ ಆರ್. ಹೊಸಳ್ಳಿ ಗ್ರೂಪ್ ಡಿ ನೌಕರರು ತಮಗೆ ನಿರ್ವಹಿಸಿದ ಆಸ್ಪತ್ರೆಯ ದೈನಂದಿನ ಕೆಲಸವನ್ನು ಸರಿಯಾಗಿ ನಿರ್ವಹಿಸದಿರುವುದು, ನಿರ್ದೇಶನಾಲಯದಿಂದ ಬ್ಯಾಂಕಿನವರಿಗೆ ಕೋರಲಾದ ಮಾಹಿತಿಯ ಬಗ್ಗೆ ತನ್ನ ಪರವಾನಗಿ ಇಲ್ಲದೆ ಮಾಹಿತಿಯನ್ನು ನೀಡದಿರುವಂತೆ ಬ್ಯಾಂಕಿನವರಿಗೆ ಪತ್ರ ಬರೆದಿರುವುದು, ಹೊರಗಿನ ವ್ಯಕ್ತಿಗಳನ್ನು ಆಸ್ಪತ್ರೆಯ ಆವರಣದಲ್ಲಿ ಕರೆದುಕೊಂಡು ಬಂದು ಧರಣಿ ನಡೆಸುವುದು ಮುಂತಾದ ನಡತೆಗಳು ಸರ್ಕಾರಿ ನೌಕರರಿಗೆ ಸಲ್ಲದ ನಡವಳಿಕೆಯಿಂದ ಕೂಡಿದ ವರ್ತನೆಯಾಗಿರುವುದು ಸ್ಪಷ್ಟವಾಗಿ ಕಂಡು ಬಂದಿದೆ. ಸದರಿ ಆರೋಪಿತ ಸರ್ಕಾರಿ ನೌಕರರ ಜೂನ್ ಮತ್ತು ಜುಲೈ 2009ರ ಸಂಬಳದ ಮೊತ್ತದ ಪೈಕಿ ₹ 7,325/–ಗಳನ್ನು ಜಿಇಸಿ ಬ್ಯಾಂಕ್ ಧಾರವಾಡ ಇಲ್ಲಿಗೆ ಪಾವತಿಸುವ ಕ್ರಮ ಕೈಗೊಂಡು ಉಳಿಕೆ ಮೊತ್ತ ₹ 875/– ಗಳನ್ನು ನೌಕರರ ಖಾತೆಗೆ ಜಮೆ ಮಾಡಿರುವುದು, ಆಗಸ್ಟ್ 2009ರಲ್ಲಿ ಹಬ್ಬದ ಮುಂಗಡ ₹ 3,500/–ವನ್ನು ಮತ್ತು ಜೂನ್ 2009ರ ಮಾಹೆಯಲ್ಲಿ ಗಳಿಕೆರಜೆ ನಗದೀಕರಣ ಮೊತ್ತ ₹ 7,468/–ಗಳನ್ನು ಆರೋಪಿತ ಸರ್ಕಾರಿ ನೌಕರರು ಪಡೆದು ಸ್ವತಃ ಬಟವಾಡೆ ಪುಸ್ತಕದಲ್ಲಿ ಸಹಿ ಮಾಡಿರುವುದು ದಾಖಲೆಗಳಿಂದ ತಿಳಿದುಬರುತ್ತದೆ.ಸದರಿ ಶಿಸ್ತು ಪ್ರಕರಣದಲ್ಲಿ ಸರ್ಕಾರಿ ಹಣವನ್ನಾಗಲೀ, ಅಥವಾ ಶ್ರೀ ಪ್ರಶಾಂತ್‌ಕುಮಾರ್ ಆರ್. ಹೊಸಳ್ಳಿ ಗ್ರೂಪ್ ಡಿ ಇವರ ವೇತನವನ್ನಾಗಲೀ, ದುರುಪಯೋಗಪಡಿಸಿಕೊಂಡಿರುವುದು ಕಂಡುಬರುವುದಿಲ್ಲ.

ಮುಂದುವರಿದಂತೆ ಒಬ್ಬ ಸರ್ಕಾರಿ ನೌಕರನಾಗಿ ತಮ್ಮ ಮೇಲಾಧಿಕಾರಿಗಳ ಪೂರ್ವಾನುಮತಿಯಿಲ್ಲದೆ ಇಲಾಖೆಯ ಮುಖ್ಯಸ್ಥರಿಗೆ, ಸರ್ಕಾರದ ಮಾನ್ಯ ಮಂತ್ರಿಯವರಿಗೆ ನೇರವಾಗಿ ಪತ್ರಗಳನ್ನು ಬರೆಯುವಂತಹ ವರ್ತನೆಯು ಸರ್ಕಾರಿ ನೌಕರನಿಗೆ ಸಲ್ಲದ ವರ್ತನೆಯಾಗಿರುತ್ತದೆ.

ಆದ್ದರಿಂದ ಮೇಲ್ಕಂಡ ಆರೋಪಿತ ಸರ್ಕಾರಿ ಅಧಿಕಾರಿ/ನೌಕರರು ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಗಳು 1966ರ ನಿಯಮ 3, ಹಾಗೂ 6 (3) ರಡಿ ಅಪರಾಧವೆಸಗಿರುವುದು ಕಂಡು ಬಂದಿರುವುದರಿಂದ ಈ ಕೆಳಕಂಡ ಆದೇಶ

**ಆದೇಶ ಸಂಖ್ಯೆ: ಕಾಇ 440 ಎಲ್‌ಎಸ್‌ಐ 2011, ದಿನಾಂಕ: 12–02–2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಮೇಲ್ಕಂಡ ಅಂಶಗಳ ಹಿನ್ನಲೆಯಲ್ಲಿ ಡಾ. ಬಸವರಾಜ್ ಎಸ್. ಗಂಗಾಲ್ ವೈದ್ಯಕೀಯ ಅಧೀಕ್ಷಕರು, ಶ್ರೀ ಜಿ.ಜಿ.ಭಂಡಿ ಕಛೇರಿ ಅಧೀಕ್ಷಕರು ಮತ್ತು ಶ್ರೀ ಪ್ರಶಾಂತ್ ಕುಮಾರ್ ಆರ್. ಹೊಸಳ್ಳಿ ಗ್ರೂಪ್ ಡಿ ಕಾರಾವಿ ಆಸ್ಪತ್ರೆ ಹುಬ್ಬಳ್ಳಿ ಇವರುಗಳಿಗೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 8(ii) ರಡಿ **"ವಾಗ್ದಾಂಡನೆ"** ಯನ್ನು ವಿಧಿಸಲಾಗಿದೆ ಮತ್ತು ಇನ್ನು ಮುಂದೆ ಈ ರೀತಿಯಾಗಿ ಇಂತಹ ಸಂದರ್ಭಗಳು ಮರುಕಳಿಸದಂತೆ ಎಚ್ಚರಿಕೆಯಿಂದ ಕರ್ತವ್ಯ ನಿರ್ವಹಸುವಂತೆ ಸೂಚಿಸಲಾಗಿದೆ. ಶ್ರೀ ಹೆಚ್.ಕೆ. ರಾಜಪ್ಪ

ಲೇ-ಕಾರ್ಯದರ್ಶಿಗಳು ಕಾರಾವಿ ಆಸ್ಪತ್ರೆ ಹುಬ್ಬಳ್ಳಿ ಇವರು ದಿನಾಂಕ:31-07-2011ರಂದು ಸರ್ಕಾರಿ ಸೇವೆಯಿಂದ ವಯೋನಿವೃತ್ತಿಯನ್ನು ಹೊಂದಿರುವುದರಿಂದ ಸದರಿ ನೌಕರರನ್ನು ಆರೋಪದಿಂದ ಮುಕ್ತರನ್ನಾಗಿ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ,ಮತ್ತು ಅವರ ಹೆಸರಿನಲ್ಲಿ,

**ಗೋವಿಂದ ಸ್ವಾಮಿ**

ಪೀಠಾಧಿಕಾರಿ-5

ಕಾರ್ಮಿಕ ಇಲಾಖೆ. ಕಾ.ರಾ.ವಿ.ಯೋ (ವೈ) ಸೇವೆಗಳು.

PR.502

S/C.50

## ಕಂದಾಯ ಸಚಿವಾಲಯ

**ವಿಷಯ:** ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ತಾಲ್ಲೂಕು, ಕಸಬಾ ಹೋಬಳಿ, ಸಿದ್ಲಿಪುರ ಮತ್ತು ದೇವಕಾತಿಕೊಪ್ಪ ಗ್ರಾಮಗಳಲ್ಲಿ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿ (KIADB) ಭೂ ಸ್ವಾಧೀನಪಡಿಸಿಕೊಂಡ ಜಮೀನಿನ ಪೈಕಿ 80-00 ಎಕರೆ ಜಮೀನನ್ನು ಆಶ್ರಯ ಯೋಜನೆಯಡಿ ರಾಜೀವ್‌ಗಾಂಧಿ ಗ್ರಾಮೀಣ ವಸತಿ ನಿಗಮಕ್ಕೆ ಉಚಿತವಾಗಿ ಹಸ್ತಾಂತರಿಸಿರುವುದಕ್ಕೆ ಬದಲಾಗಿ ದೇವಕಾತಿ ಗ್ರಾಮದ 118-10 ಎಕರೆ ಸರ್ಕಾರಿ ಜಮೀನನ್ನು ಹಸ್ತಾಂತರಿಸುವ ಬಗ್ಗೆ.

**ಓದಲಾಗಿದೆ:**
1. ಜಿಲ್ಲಾಧಿಕಾರಿ, ಶಿವಮೊಗ್ಗ ರವರ ಪತ್ರ ಸಂಖ್ಯೆ: ಎಲ್.ಎನ್.ಡಿ(1)ಸಿ.ಆರ್-369/ 12-13 (5925/12-13) ದಿನಾಂಕ:08-02-2013.
2. ಸರ್ಕಾರದ ಅಧೀನ ಕಾರ್ಯದರ್ಶಿ(ಕೈಅ), ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ ಇವರ ಅ.ಟಿ. ಸಂಖ್ಯೆ: ಸಿಐ 54 ಎಸ್‌ಪಿಕ್ಯೂ 2013 ದಿನಾಂಕ:01-02-2013.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ಜಿಲ್ಲಾಧಿಕಾರಿಗಳ ಪತ್ರದಲ್ಲಿ ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ತಾಲ್ಲೂಕು, ಕಸಬಾ ಹೋಬಳಿ, ಸಿದ್ಲಿಪುರ ಮತ್ತು ದೇವಕಾತಿಕೊಪ್ಪ ಗ್ರಾಮಗಳ ಒಟ್ಟು 574-20 ಎಕರೆ ಜಮೀನಿನ ಪೈಕಿ ಸಿದ್ಲಿಪುರ ಗ್ರಾಮದ ಸ.ನಂ.6 ರಲ್ಲಿ 42.10 ಎಕರೆ ಸರ್ಕಾರಿ ಮತ್ತು ಸ.ನಂ.6 ಮತ್ತು 8 ರಲ್ಲಿ 37.30 ಎಕರೆ ಹಿಡುವಳಿ ಜಮೀನು ಸೇರಿದಂತೆ ಒಟ್ಟು 80-00 ಎಕರೆ ಪ್ರದೇಶವನ್ನು ಆಶ್ರಯ ಯೋಜನೆಗಾಗಿ ಮೆ: ರಾಜೀವ್ ಗಾಂಧಿ ರೂರಲ್ ಹೌಸಿಂಗ್ ಕಾರ್ಪೋರೇಷನ್ ರವರಿಗೆ ಉಚಿತವಾಗಿ ಹಸ್ತಾಂತರಿಸಲು ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ ಅನುಮೋದನೆ ನೀಡಿದೆ. ಇದಕ್ಕೆ ಬದಲಾಗಿ ಸದರಿ ಪ್ರದೇಶದಲ್ಲಿನ 118-10 ಎಕರೆ ಸರ್ಕಾರಿ ಜಮೀನನ್ನು (ಖರಾಬು ಸೇರಿದಂತೆ) ಉಚಿತವಾಗಿ ಕೆ.ಐ.ಎ.ಡಿ.ಬಿ ಗೆ ವರ್ಗಾಣೆ ಮಾಡಲು ಸೂಕ್ತ ಕ್ರಮ ಕೈಗೊಳ್ಳುವಂತೆ ಕೋರಿರುತ್ತಾರೆ. ದೇವಕಾತಿ ಕೊಪ್ಪ ಗ್ರಾಮದ ಸ.ನಂ.44, ಸ.ನಂ.45, ಸ.ನಂ.47, ಸ.ನಂ.51, ಸ.ನಂ.52, ಸ.ನಂ.62, ಸ.ನಂ.64, ಸ.ನಂ.82, ಸ.ನಂ.114ರ ಒಟ್ಟು 82-21 ಎಕರೆ ವಿಸ್ತೀರ್ಣದ ಸರ್ಕಾರಿ ಜಮೀನನ್ನು ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿ, ಮಂಗಳೂರು ರವರು ಕೈಗಾರಿಕಾ ಪ್ರದೇಶಾಭಿವೃದ್ಧಿ ಗೋಸ್ಕರ ಭೂ ಸ್ವಾಧೀನಪಡಿಸಿರುವ ಪ್ರದೇಶದಲ್ಲಿ ಸದರಿ ಸ.ನಂ.ಗಳು ಒಳಗೊಂಡಿದ್ದು, ಈ ಜಮೀನುಗಳು ಸರ್ಕಾರಿ ಜಮೀನು ಆಗಿರುವುದರಿಂದ ಕರ್ನಾಟಕ ಭೂ ಕಂದಾಯ ಕಾಯ್ದೆ 1964ರ ಕಲಂ 71 ರಡಿಯಲ್ಲಿ ಸರ್ಕಾರಕ್ಕೆ ಕಾಯ್ದಿರಿಸಲು ಶಿಫಾರಸ್ಸು ಮಾಡಿರುತ್ತಾರೆ. ಸಿದ್ಲಿಪುರ ಗ್ರಾಮದ ಸರ್ಕಾರಿ ಜಮೀನುಗಳನ್ನು ಹಸ್ತಾಂತರಿಸಲು ಗ್ರಾಮಸ್ಥರು ವಿರೋಧ ವ್ಯಕ್ತಪಡಿಸಿರುವುದಾಗಿ ತಹಶೀಲ್ದಾರ್ ವರದಿಯಲ್ಲಿ ತಿಳಿಸಿರುತ್ತಾರೆ. ಕೆ.ಐ.ಎ.ಡಿ.ಬಿ. ಅಧಿಸೂಚನೆಗೊಂಡ ಜಮೀನುಗಳ ಪೈಕಿ ಕೆರೆಗಳು ಇರುವುದಾಗಿ ಈ ಹಿಂದೆ ಸದರಿ ಕೆರೆಗಳು ಸಾರ್ವಜನಿಕ ಬಳಕೆಯಲ್ಲಿರುವಂತೆ ಮುಂದೆಯೂ ಸಹ ಸಾರ್ವಜನಿಕರ ಉಪಯೋಗಕ್ಕೆ ಕಾಯ್ದಿರಿಸುವ ಷರತ್ತಿಗೊಳಪಟ್ಟು ಮೇಲ್ಕಂಡ ಜಮೀನುಗಳನ್ನು ಕೆ.ಐ.ಎ.ಡಿ.ಬಿ ಗೆ ಹಸ್ತಾಂತರಿಸಲು ಶಿಫಾರಸ್ಸು ಮಾಡಿರುತ್ತಾರೆ.

ಪ್ರಯುಕ್ತ ದೇವಕಾತಿ ಕೊಪ್ಪ ಗ್ರಾಮದ ಸ.ನಂ.44, ಸ.ನಂ.45, ಸ.ನಂ.47, ಸ.ನಂ.51, ಸ.ನಂ.52, ಸ.ನಂ.62, ಸ.ನಂ.64, ಸ.ನಂ.82, ಸ.ನಂ.114ರ ಒಟ್ಟು 82-21 ಎಕರೆ ವಿಸ್ತೀರ್ಣದ ಜಮೀನು ಹಾಗೂ ಸಿದ್ಲಿಪುರ ಗ್ರಾಮದ ಸ.ನಂ.6, ಸ.ನಂ.25, ಸ.ನಂ.28, ಸ.ನಂ.29/3ರ ಒಟ್ಟು 109-06 ಎಕರೆ ವಿಸ್ತೀರ್ಣದ ಸರ್ಕಾರಿ ಜಮೀನನ್ನು ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿ, ಮಂಗಳೂರು ರವರು ಕೈಗಾರಿಕಾ ಪ್ರದೇಶಾಭಿವೃದ್ಧಿಗೋಸ್ಕರ ಭೂ ಸ್ವಾಧೀನಪಡಿಸಿರುವ ಪ್ರದೇಶದಲ್ಲಿ ಸದರಿ ಸ.ನಂ.ಗಳು ಒಳಗೊಂಡಿದ್ದು ಈ ಜಮೀನುಗಳು ಸರ್ಕಾರಿ ಜಮೀನು ಆಗಿರುವುದರಿಂದ ಉಚಿತವಾಗಿ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿ, ಮಂಗಳೂರು ರವರಿಗೆ ಹಸ್ತಾಂತರಿಸಲು ಅದೇಶ ಮಾಡಲು ಕೋರಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಸರ್ಕಾರದ ಅಧೀನ ಕಾರ್ಯದರ್ಶಿ, ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ ಇವರ ಅನಧಿಕೃತ ಟಿಪ್ಪಣಿಯಲ್ಲಿ ಕೆ.ಐ.ಎ.ಡಿ.ಬಿ. ವತಿಯಿಂದ ಭೂಸ್ವಾಧೀನಪಡಿಸಿರುವ ಸಿದ್ಲಿಪುರ ಗ್ರಾಮದ ಸ.ನಂ.6 ರಲ್ಲಿ 42-10 ಎಕರೆ ಸರ್ಕಾರಿ ಹಾಗೂ ಸ.ನಂ.6 ಮತ್ತು 8 ರಲ್ಲಿನ 37-30 ಎಕರೆ ಹಿಡುವಳಿ ಜಮೀನು ಸೇರಿದಂತೆ ಒಟ್ಟು 80-00 ಎಕರೆ ಆಶ್ರಯ ಯೋಜನೆಗಾಗಿ ಮೆ.ರಾಜೀವ್ ಗಾಂಧಿ ರೂರಲ್ ಹೌಸಿಂಗ್ ಕಾರ್ಪೋರೇಷನ್ ರವರಿಗೆ ಉಚಿತವಾಗಿ ಹಸ್ತಾಂತರಿಸಲು ನಿರ್ಣಯಿಸಿದೆ. ಈ ಜಮೀನಿನ ಬದಲಾಗಿ ಕೆ.ಐ.ಎ.ಡಿ.ಬಿ.ಯು ಭೂ ಸ್ವಾಧೀನಪಡಿಸಿಕೊಂಡಿರುವ ಸಿದ್ಲಿಪುರ ಮತ್ತು ದೇವಕಾತಿಕೊಪ್ಪ ಗ್ರಾಮಗಳ ಒಟ್ಟು 574-20 ಎಕರೆ ಜಮೀನಿನ ಪೈಕಿ 118-10 ಎಕರೆ (ಖರಾಬು ಸೇರಿ) ಸರ್ಕಾರಿ ಜಮೀನನ್ನು ಉಚಿತವಾಗಿ ಕೆ.ಐ.ಎ.ಡಿ.ಬಿ.ಗೆ ವರ್ಗಾವಣೆ ಮಾಡುವಂತೆ ಕೋರಿರುತ್ತಾರೆ.

ಈ ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 06 ಎಲ್‌ಜಿಎಸ್ 2013, ಬೆಂಗಳೂರು, ದಿನಾಂಕ:13-03-2013.**

ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ತಾಲ್ಲೂಕು, ಕಸಬಾ ಹೋಬಳಿ, ಸಿದ್ಲಿಪುರ ಹಾಗೂ ದೇವಕಾತಿಕೊಪ್ಪ ಗ್ರಾಮಗಳಲ್ಲಿ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿಗೆ ವಶಪಡಿಸಿಕೊಂಡಿದ್ದ ಸ.ನಂ.6 ರಲ್ಲಿ 42.10 ಎಕರೆ ಸರ್ಕಾರಿ ಹಾಗೂ ಸ.ನಂ.6 ಮತ್ತು 8 ರಲ್ಲಿ 37.30 ಎಕರೆ ಹಿಡುವಳಿ ಜಮೀನು ಸೇರಿದಂತೆ ಒಟ್ಟು 80-00 ಎಕರೆ ಜಮೀನನ್ನು ಆಶ್ರಯ ಯೋಜನೆಯಡಿ ಮೆ॥ ರಾಜೀವ್‌ಗಾಂಧಿ ರೂರಲ್ ಹೌಸಿಂಗ್ ಕಾರ್ಪೋರೇಷನ್ ರವರಿಗೆ ಉಚಿತವಾಗಿ ಹಸ್ತಾಂತರಿಸಲು ನಿರ್ಣಯಿಸಿರುವುದರಿಂದ ಇದಕ್ಕೆ **ಬದಲಾಗಿ** ಸಿದ್ಲಿಪುರ ಗ್ರಾಮದ ಹಾಗೂ ದೇವಕಾತಿಕೊಪ್ಪ ಗ್ರಾಮದ ಖರಾಬು ಜಮೀನು

